# ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ : ಅಭಿವೃದ್ಧಿ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್.
ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

**ಮಹಾದೇವ ಎಂ. ನಿಂಬರಗಿ**

ಆಯ್ಕೆ ಶ್ರೇಣಿ ಉಪನ್ಯಾಸಕರು,
ವಾಣಿಜ್ಯಶಾಸ್ತ್ರ ವಿಭಾಗ,
ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಎಸ್. ವಾಣಿಜ್ಯ ಮಹಾವಿದ್ಯಾಲಯ,
ಮಹಾಲಿಂಗಪುರ - ೫೮೭ ೩೧೨
ತಾ : ಮುಧೋಳ ಜಿ : ಬಾಗಲಕೋಟ

ಮಾರ್ಗದರ್ಶಕರು

**ಡಾ. ಸದಾಶಿವ ಓ. ಹಲಸಗಿ**

ಆಯ್ಕೆ ಶ್ರೇಣಿ ಉಪನ್ಯಾಸಕರು,
ವಾಣಿಜ್ಯಶಾಸ್ತ್ರ ವಿಭಾಗ,
ಶಿವಾನಂದ ಮಹಾವಿದ್ಯಾಲಯ,
ಕಾಗವಾಡ - ೫೯೧ ೨೨೩
ತಾ : ಅಥಣಿ ಜಿ : ಬೆಳಗಾವಿ



ಅಧ್ಯಯನಾಂಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಕಾರೂಗೇರಿ,
ಜಿ : ಬೆಳಗಾವಿ

**ಮಾನ್ಯತೆ :**
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ : ಅಭಿವೃದ್ಧಿ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನ ವಿಷಯದಲ್ಲಿ ಎಂ.ಫಿಲ್.
ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕರು
**ಮಹಾದೇವ ಎಂ. ನಿಂಬರಗಿ**
ಆಯ್ಕೆ ಶ್ರೇಣಿ ಉಪನ್ಯಾಸಕರು,
ವಾಣಿಜ್ಯಶಾಸ್ತ್ರ ವಿಭಾಗ,
ಎಸ್.ಸಿ.ಪಿ. ಕಲಾ ಹಾಗೂ ಡಿ.ಡಿ.ಎಸ್. ವಾಣಿಜ್ಯ ಮಹಾವಿದ್ಯಾಲಯ,
**ಮಹಾಲಿಂಗಪುರ - ೫೮೭ ೩೧೨**
ತಾ : ಮುಧೋಳ ಜಿ : ಬಾಗಲಕೋಟ

ಮಾರ್ಗದರ್ಶಕರು
**ಡಾ. ಸದಾಶಿವ ಓ. ಹಲಸಗಿ**
ಆಯ್ಕೆ ಶ್ರೇಣಿ ಉಪನ್ಯಾಸಕರು,
ವಾಣಿಜ್ಯಶಾಸ್ತ್ರ ವಿಭಾಗ,
ಶಿವಾನಂದ ಮಹಾವಿದ್ಯಾಲಯ,
**ಕಾಗವಾಡ - ೫೯೧ ೨೨೩**
ತಾ : ಅಥಣಿ ಜಿ : ಬೆಳಗಾವಿ







——— ಅಧ್ಯಯನಾಂಗ ———
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ - ೫೮೩ ೨೭೬, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

**ಬಿ. ಆರ್. ದರೂರ ಸಂಶೋಧನಾ ಕೇಂದ್ರ, ಹಾರೂಗೇರಿ,**
ಜಿ : ಬೆಳಗಾವಿ

**ಮಾನ್ಯತೆ :**
ಕನ್ನಡ ವಿಶ್ವವಿದ್ಯಾಲಯ, ಹಂಪಿ

**೨೦೦೮**

# ದೃಢೀಕರಣ ಪತ್ರ

ಮಹಾದೇವ ಎಂ. ನಿಂಬರಗಿ ಅವರು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನದ ವಿಭಾಗದಲ್ಲಿ ಸಂಶೋಧನೆ ಕೈಕೊಂಡು 'ಕೃಷಿ ಉತ್ಪನ್ನಮಾರುಕಟ್ಟೆ ಸಮಿತಿ : ಅಭಿವೃದ್ಧಿ ಅಧ್ಯಯನ' ಎಂಬ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇವರ ಮೂಲ ಸಂಶೋಧನಾ ಪ್ರಬಂಧವಾಗಿದ್ದು, ಈ ಮೊದಲು ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಮತ್ತು ಇದು ನೂತನ ಪ್ರಬಂಧವಾಗಿದೆ ಎಂದು ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ.

ದಿನಾಂಕ : ೦೪.೧೦-೨೦೦೮

**ಡಾ. ಎಸ್. ಓ. ಹಲಸಗಿ**
ಎಂ.ಕಾಂ.,ಪಿಎಚ್.ಡಿ.
ಮಾರ್ಗದರ್ಶಕರು,
ಶಿವಾನಂದ ಮಹಾವಿದ್ಯಾಲಯ,
ಕಾಗವಾಡ

# ಘೋಷಣಾಪತ್ರ

'ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ : ಅಭಿವೃದ್ಧಿ ಅಧ್ಯಯನ' ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಡಾ. ಎಸ್. ಓ. ಹಲಸಗಿ, ಆಯ್ಕೆ ಶ್ರೇಣಿ ಉಪನ್ಯಾಸಕರು, ಶಿವಾನಂದ ಮಹಾವಿದ್ಯಾಲಯ, ಕಾಗವಾಡ, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಪ್ರಬಂಧವನ್ನು ನಾನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಬಳಸಿಕೊಂಡಿಲ್ಲವೆಂದು, ಇದು ನೂತನ ಪ್ರಬಂಧವಾಗಿದೆಯೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೦೪-೧೦-೨೦೦೮

**ಮಹಾದೇವ ಎಂ. ನಿಂಬರಗಿ**
ಎಂ.ಕಾಂ. ಟೀಚರ್‌ಫೆಲೋ
ಅಭಿವೃದ್ಧಿ ಅಧ್ಯಯನದ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬.

# ಅಧ್ಯಯನದ ವಿನ್ಯಾಸ

# ಕೋಷ್ಟಕಗಳ ಯಾದಿ

# ಅನುಬಂಧಗಳು

## ನಕಾಶೆಗಳ ಯಾದಿ

# ಅಧ್ಯಾಯ ಒಂದು
# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

# ಅಧ್ಯಾಯ ಒಂದು :
# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ೧.೧ ಪ್ರವೇಶ : ಕೃಷಿ ಮಾರುಕಟ್ಟೆ ಪದ್ಧತಿ :

ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಕುರಿತು ವಿಶದವಾಗಿ ಅಭ್ಯಸಿಸುವ ಮೊದಲು ಸಾರ್ವತ್ರಿಕವಾಗಿ ಮಾರುಕಟ್ಟೆಯ ಸ್ವರೂಪವನ್ನು ಪರಿಚಯ ಮಾಡಿಕೊಳ್ಳುವದು ಸೂಕ್ತವಾಗಿದೆ.

**ಮಾರುಕಟ್ಟೆಯ ಅರ್ಥ :** 'ಮಾರುಕಟ್ಟೆ' ಎಂಬ ಪದವು 'ಮಾರ್ಕಾಟಸ್' ಎಂಬ ಲ್ಯಾಟಿನ್ ಪದದಿಂದ ಉದ್ಭವವಾಗಿದೆ. ಲ್ಯಾಟಿನ್ ಭಾಷೆಯಲ್ಲಿ 'ಮಾರ್ಕಾಟಸ್' ಎಂಬುದಕ್ಕೆ 'ವ್ಯಾಪಾರ' ಎಂಬುದು ಒಂದು ಅರ್ಥ ಮತ್ತು 'ವ್ಯವಹಾರವನ್ನು ನಡೆಸುವ ಸ್ಥಳ' ಎಂಬುದು ಇನ್ನೊಂದು ಅರ್ಥ.[೧]

ಸಾಮಾನ್ಯವಾಗಿ ಮಾರುಕಟ್ಟೆ ಎಂದರೆ ಕೊಳ್ಳುವವರು ಮತ್ತು ಮಾರುವವರು ಸಂಧಿಸುವ ಒಂದು ನಿರ್ದಿಷ್ಟ ಸ್ಥಳವಾಗಿರುತ್ತದೆ. ಆ ಸ್ಥಳದಲ್ಲಿ ಮಾರುವವರು ತಾವು ಮಾರಾಟಮಾಡಬೇಕಾಗಿರುವ ಸರಕುಗಳನ್ನು ಪ್ರದರ್ಶಿಸಿಕೊಂಡು ಕೊಳ್ಳುವವರ ನಿರೀಕ್ಷಣೆಯಲ್ಲಿರುತ್ತಾರೆ; ಮತ್ತು ಕೊಳ್ಳುವವರು ಆ ಸ್ಥಳಕ್ಕೆ ಹೋಗಿ ತಮಗೆ ಬೇಕಾಗಿರುವ ಸರಕುಗಳನ್ನು ಚೌಕಾಸಿ ಮಾಡಿ ಖರೀದಿಸುತ್ತಾರೆ. ಆದುದರಿಂದಲೇ ಆ ಮಾರುಕಟ್ಟೆಗಳನ್ನು ಅಲ್ಲಿ ವ್ಯವಹರಿಸುವ ಉತ್ಪನ್ನದ ಆಧಾರದ ಮೇಲೆ ತರಕಾರಿ ಮಾರುಕಟ್ಟೆ, ಹಣ್ಣಿನ ಮಾರುಕಟ್ಟೆ ಬೆಲ್ಲದ ಮಾರುಕಟ್ಟೆ, ಮಾಂಸದ ಮಾರುಕಟ್ಟೆ, ಹೂವಿನ ಮಾರುಕಟ್ಟೆ, ಮೀನಿನ ಮಾರುಕಟ್ಟೆ ಮುಂತಾದ ಪರಿಕಲ್ಪನೆಗಳನ್ನು ಬಳಸಲಾಗುತ್ತದೆ.

ಅರ್ಥಶಾಸ್ತ್ರ ಮತ್ತು ವಿಕ್ರಯಶಾಸ್ತ್ರದಲ್ಲಿ ಮಾರುಕಟ್ಟೆಗೆ ನಿರ್ದಿಷ್ಟವಾದ ಸ್ಥಳದ ಅವಶ್ಯಕತೆ ಇಲ್ಲ. ಮಾರುವವರು ಮತ್ತು ಕೊಳ್ಳುವವರು ನೇರವಾಗಿ ಸಂಧಿಸುವ ಅವಶ್ಯಕತೆಯಿಲ್ಲ. ಅವರು ಬಹುದೂರದ ಪ್ರದೇಶಗಳಲ್ಲಿದ್ದು ಅಂಚೆ-ತಂತಿ ಮತ್ತು ದೂರವಾಣಿ ಮುಂತಾದ ಮಾಧ್ಯಮಗಳ ಮೂಲಕ ವ್ಯವಹರಿಸಿ ವ್ಯಾಪಾರವನ್ನು ಕುದುರಿಸಬಹುದು.

ಹೀಗೆ ಮಾರುಕಟ್ಟೆಯು ಸರಕುಗಳನ್ನು ಖರೀದಿಸುವ ಮತ್ತು ಮಾರುವ ಒಂದು ನಿರ್ದಿಷ್ಟ ಸ್ಥಳವಾಗಿರಬಹುದು. ಅದು ಯಾವುದೇ ಒಂದು ಸರಕನ್ನು ಖರೀದಿಸುವ ಮತ್ತು ಮಾರಾಟದ ಸಾಮರ್ಥ್ಯವುಳ್ಳ ಜನರನ್ನು ಒಳಗೊಂಡ ಒಂದು ವ್ಯವಸ್ಥೆಯಾಗಿರಬಹುದು; ಒಂದು ಪ್ರದೇಶದ ಅಥವಾ ದೇಶದ ಕೊಳ್ಳುವವರು ಮತ್ತು ಮಾರುವವರನ್ನು ಒಳಗೊಂಡಿರುವ ವ್ಯವಸ್ಥೆಯಾಗಿರಬಹುದು. ಸರಕುಗಳ ವಿನಿಮಯಕ್ಕೆ ಸೌಲಭ್ಯಗಳನ್ನು ಒದಗಿಸುವ ಒಂದು ಸಂಸ್ಥೆ ಅಥವಾ ವ್ಯವಸ್ಥೆಯಾಗಿರಬಹುದು.

ಕೃಷಿ ಮಾರುಕಟ್ಟೆ ಅಧ್ಯಯನ ಎಂದರೆ ರೈತರಿಂದ ಬೇಸಾಯ ಹೂಡುವಳಿಗಳ ಸಂಗ್ರಹಣೆ ಮತ್ತು ಹೊಲಗದ್ದೆಗಳಿಂದ ಗ್ರಾಹಕ ಸ್ಥಳಗಳಿಗೆ ಕೃಷಿ ಉತ್ಪನ್ನಗಳನ್ನು ಸಾಗಾಟದ ಸಂಬಂಧಿತ ಚಟುವಟಿಕೆಗಳ, ಸಂಸ್ಥೆಗಳ ಮತ್ತು ನೀತಿಗಳ ಅಧ್ಯಯನವಾಗಿದೆ.

ಹೀಗೆ ಮಾರುಕಟ್ಟೆ ಎಂದರೆ ಕೇವಲ ಉತ್ಪನ್ನಗಳನ್ನು ಮಾರಾಟ ಮಾಡುವ ಕಾರ್ಯ ಮಾತ್ರವಲ್ಲ. ಅದು ಉತ್ಪಾದಕನಿಂದ ಅನುಭೋಗಿಗಳಿಗೆ ಸರಕುಗಳ (ಉತ್ಪನ್ನಗಳ) ಪ್ರವಹವನ್ನು ನಿರ್ದೇಶಿಸುವ ಎಲ್ಲಾ ಉದ್ಯಮ ಚಟುವಟಿಕೆಗಳನ್ನು ಒಳಗೊಂಡಿರುವ ವ್ಯವಸ್ಥೆಯಾಗಿದೆ. ಇದು ಮಾನಸಿಕ ಮತ್ತು ಭೌತಿಕ ಎರಡೂ ವಿಷಯಗಳನ್ನು ಒಳಗೊಂಡಿರುತ್ತದೆ.

**೧.೨ ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಸ್ಥಿತಿ-ಗತಿ :**

ಸ್ವತಂತ್ರಾಪೂರ್ವದಲ್ಲಿ ಕರ್ನಾಟಕದ ಕೃಷಿ ಉತ್ಪನ್ನ ಮಾರುಕಟ್ಟೆಯ ಸ್ಥಿತಿಯು, ಭಾರತದ ಕೃಷಿ ಉತ್ಪನ್ನದ ಮಾರುಕಟ್ಟೆಯ ಸ್ಥಿತಿಗತಿಗಿಂತ ವಿಭಿನ್ನವಾಗಿರಲಿಲ್ಲ.

ಭಾಷಾವಾರು ರಾಜ್ಯ ಸ್ಥಾಪನೆಯಾಗುವ ಮೊದಲು, ಮುಂಬೈ ಕರ್ನಾಟಕದ ವಿಭಾಗಗಳಾದ ಬೆಳಗಾಂವ, ಬಿಜಾಪುರ, ಧಾರವಾಡ ಮುಂತಾದ ಪ್ರದೇಶಗಳಲ್ಲಿ ಬಾಂಬೆ ಹತ್ತಿ ಮಾರುಕಟ್ಟೆಯ ಕಾಯ್ದೆ ೧೯೨೭ ರ ಅನ್ವಯ ಕೃಷಿ ಉತ್ಪನ್ನಗಳು ಮಾರಾಟ ವಹಿವಾಟುಗಳು ನಡೆಯುತ್ತಿದ್ದವು. ಈ ಕಾನೂನಿನ ಅನ್ವಯ ಬೆಳಗಾಂವ ಜಿಲ್ಲೆಯ ಬೈಲಹೊಂಗಲದಲ್ಲಿ ೧೯೩೬ರಲ್ಲಿ ಹತ್ತಿಯ ಮಾರಾಟ ನಿಯಂತ್ರಣಕ್ಕೆ ಹತ್ತಿ ಮಾರುಕಟ್ಟೆಯನ್ನು ಸ್ಥಾಪಿಸಲಾಯಿತು. ರಾಯಚೂರ ನಿಯಂತ್ರಿತ ಮಾರುಕಟ್ಟೆಯನ್ನು ೧೯೩೩ ರ ಹೈದ್ರಾಬಾದ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾನೂನಡಿಯಲ್ಲಿ ೧೯೩೪ ರಲ್ಲಿ ಸ್ಥಾಪಿಸಲಾಯಿತು. ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ೧೯೩೩ ರ ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾನೂನಿನ ಅಡಿಯಲ್ಲಿ ಕಾರ್ಯ ನಡೆಯುತ್ತಿದ್ದವು. ಮೈಸೂರು ಪ್ರಾಂತ್ಯದಲ್ಲಿ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆಯ ಕಾನೂನು ೧೯೩೯ ಜಾರಿಯಲ್ಲಿತ್ತು. ಆದರೆ ೧೯೪೭ ರ ವರೆಗೆ ಈ ಪ್ರದೇಶದಲ್ಲಿ ಮಾರುಕಟ್ಟೆ ಸ್ಥಾಪನೆಗೆ ಪ್ರಯತ್ನಗಳು ಮುಂದುವರೆದಿದ್ದವು. ಹೀಗೆ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ವಿವಿಧ ಕೃಷಿ ಉತ್ಪನ್ನ ಮಾರುಕಟ್ಟೆಯ ಕಾನೂನು ಜಾರಿಯಲ್ಲಿದ್ದವು.

೧೯೬೬ ರಲ್ಲಿ ರಚಿಸಿದ ಕರ್ನಾಟಕದ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಕಾನೂನನ್ನು ೧೯೬೮ ರಲ್ಲಿ ಜಾರಿಗೆ ತಂದು, ಹಿಂದೆ ಜಾರಿಯಲ್ಲಿದ್ದ ಕೃಷಿ ಉತ್ಪನ್ನ ಮಾರುಕಟ್ಟೆಗಳ ಶಾಸನಗಳನ್ನು ಅನೂರ್ಜಿತಗೊಳಿಸಲಾಯಿತು.

ಕರ್ನಾಟಕದಲ್ಲಿ ೧೯೪೭ ರಲ್ಲಿ ಅಸ್ತಿತ್ವದಲ್ಲಿದ್ದ ನಿಯಂತ್ರಿತ ಕೃಷಿ ಉತ್ಪನ್ನ ಮುಖ್ಯ ಮಾರುಕಟ್ಟೆಗಳು ಕೇವಲ ೧೧. ಭಾರತದ ರಜತಮಹೋತ್ಸವ ವರ್ಷವಾದ ೧೯೭೧ ರಲ್ಲಿ ಅವುಗಳ ಸಂಖ್ಯೆ ೯೨ಕ್ಕೆ ಏರಿತು. ಭಾರತದ ಸ್ವರ್ಣಮಹೋತ್ಸವ ವರ್ಷವಾದ ೧೯೯೭ ರಲ್ಲಿ ಈ ಸಂಖ್ಯೆ ೧೩೫ಕ್ಕೆ ಏರಿತು. ಹಾಗೂ ಉಪ-ಮಾರುಕಟ್ಟೆಗಳಲ್ಲಿ ೩೩೨ ಆಗಿತ್ತು.

ಇತ್ತೀಚಿನ ಅಂಕಿ-ಅಂಶಗಳ ಪ್ರಕಾರ ಕರ್ನಾಟಕದಲ್ಲಿ ೧೪೭ ಮುಖ್ಯ ಮಾರುಕಟ್ಟೆಗಳು, ೩೫೦ ಉಪಮಾರುಕಟ್ಟೆಗಳು ಹಾಗೂ ೭೫೦ ಗ್ರಾಮೀಣ ಮಾರುಕಟ್ಟೆಗಳು ಕಾರ್ಯನಿರ್ವಹಿಸುತ್ತವೆ.

**೧.೩ ಕೃಷಿ ಉತ್ಪನ್ನ ಮಾರುಕಟ್ಟೆಗಳ ವಿಂಗಡಣೆ :**

ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಸ್ಥೆಯಲ್ಲಿ ಮೂರು ಪ್ರಮುಖ ವಿಧಗಳಿವೆ. ಅವುಗಳೆಂದರೆ - ೧) ಪ್ರಾಥಮಿಕ ಮಾರುಕಟ್ಟೆಗಳು, ೨) ದ್ವಿತೀಯ ಮಾರುಕಟ್ಟೆಗಳು ಮತ್ತು ೩) ಅಂತಿಮ ಮಾರುಕಟ್ಟೆಗಳು.

೧) ಪ್ರಾಥಮಿಕ ಮಾರುಕಟ್ಟೆಗಳು ಹಳ್ಳಿಗಳಲ್ಲಿ ಮತ್ತು ಹಳ್ಳಿಗಳ ಸುತ್ತಮುತ್ತಲಿನಲ್ಲಿರುತ್ತವೆ. ಇವು ಗ್ರಾಮೀಣ ಮಾರುಕಟ್ಟೆಗಳಾಗಿರುತ್ತವೆ. ಇವು ಚಿಕ್ಕ ಮತ್ತು ಅತೀ ಚಿಕ್ಕ ರೈತರಿಗೆ ಮಾರುಕಟ್ಟೆಯ ವ್ಯವಸ್ಥೆಯೊಂದಿಗೆ ಸಂಪರ್ಕ ಮಾಧ್ಯಮಗಳಾಗಿ ಕಾರ್ಯನಿರ್ವಹಿಸುತ್ತವೆ.

೨) ದ್ವಿತೀಯ ಮಾರುಕಟ್ಟೆಗಳು ರಸ್ತೆಗಳ ಮತ್ತು ರೈಲು ನಿಲ್ದಾಣಗಳ ಬಳಿಯಲ್ಲಿ ನೆಲೆಗೊಂಡಿರುತ್ತವೆ. ಸುಮಾರು ೧೫ ರಿಂದ ೩೦ ಕಿ.ಮೀ. ದೂರದಿಂದ ಉತ್ಪನ್ನಗಳನ್ನು ತಂದು ಈ ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತದೆ. ಇವುಗಳಲ್ಲಿ ವರ್ಷವಿಡಿ ವ್ಯವಹಾರ ನಡೆಯುತ್ತದೆ ಮತ್ತು ಬ್ಯಾಂಕು ಹಾಗೂ ಸಂಗ್ರಹಣಾಲಯಗಳ ಸೌಲಭ್ಯವಿರುತ್ತವೆ.

೩) ಅಂತಿಮ ಮಾರುಕಟ್ಟೆಗಳು ದೊಡ್ಡ ನಗರಗಳಲ್ಲಿ ಅಥವಾ ಬಂದರು ಪ್ರದೇಶಗಳಲ್ಲಿ ನೆಲೆಸಿರುತ್ತವೆ. ಇವುಗಳ ಕಾರ್ಯಾಚರಣೆಯು ಒಂದು ರಾಜ್ಯ ಅಥವಾ ಅದಕ್ಕೆ ಹೆಚ್ಚಿನ ರಾಜ್ಯಗಳ ವ್ಯಾಪ್ತಿ ಹೊಂದಿರುತ್ತದೆ.

ಕೃಷಿ ಉತ್ಪನ್ನ ಮಾರುಕಟ್ಟೆಗಳನ್ನು, ಆ ಮಾರುಕಟ್ಟೆಯಲ್ಲಿ ವ್ಯವಹರಿಸುವ ಅಧಿಕ ಪ್ರಮಾಣದ ಕೃಷಿ ಉತ್ಪನ್ನದ ಆಧಾರದ ಮೇಲೆ ವಿಂಗಡಣೆ ಮಾಡಬಹುದು; ಹತ್ತಿ ಮಾರುಕಟ್ಟೆ, ಬೆಲ್ಲದ ಮಾರುಕಟ್ಟೆ, ದವಸ-ಧಾನ್ಯಗಳ ಮಾರುಕಟ್ಟೆ, ಎಣ್ಣೆ-ಕಾಳುಗಳ ಮಾರುಕಟ್ಟೆ ಮುಂತಾದವುಗಳು.

ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಮುಖ್ಯ ಮಾರುಕಟ್ಟೆಯಾಗಿ ನಿರ್ಧರಿಸಲು ಅದರಲ್ಲಿ ವ್ಯವಹರಿಸುವ ಉತ್ಪನ್ನಗಳ ಮೌಲ್ಯ, ಆವಕದ ಪ್ರಮಾಣ ಮತ್ತು ಪಾವತಿಸಿದ ಸುಂಕ (ಸೆಸ್)ಗಳನ್ನು ಆಧಾರವೆಂದು ಪರಿಗಣಿಸಲಾಗುತ್ತದೆ. ಈ ಮುಖ್ಯ ಮಾರುಕಟ್ಟೆಯ ಕ್ಷೇತ್ರದಲ್ಲಿ ಬರುವ ಇತರೆ ಮಾರುಕಟ್ಟೆಗಳನ್ನು ಉಪ-ಮಾರುಕಟ್ಟೆಗಳು ಹಾಗೂ ಗ್ರಾಮೀಣ ಮಾರುಕಟ್ಟೆಗಳೆಂದು ವಿಂಗಡಣೆ ಮಾಡಲಾಗುತ್ತದೆ.

ರೈತನ ಮತ್ತು ಅಂತಿಮ ಅನುಭೋಗಿಯ ನಡುವೆ ನಡೆಯುವ ಮಾರಾಟಕ್ಕೆ ಅನುಗುಣವಾಗಿ ಎಲ್ಲ ಮಾರುಕಟ್ಟೆಗಳನ್ನು ಸ್ಥಳೀಯ ಒಟ್ಟಗೂಡಿಸುವ ಮತ್ತು ಸಂಸ್ಕರಿಸುವ ಮಾರುಕಟ್ಟೆ, ಜಿಲ್ಲಾ ಕೇಂದ್ರಿಕೃತ ಮತ್ತು ಸಂಸ್ಕರಣ ಮಾರುಕಟ್ಟೆ, ಕೇಂದ್ರಿಯ ಮಾರುಕಟ್ಟೆಗಳು, ಸಮುದ್ರ ತೀರದ ಮಾರುಕಟ್ಟೆಗಳು ಹಾಗೂ ಸಗಟು ವಿತರಣ ಮಾರುಕಟ್ಟೆಗಳೆಂದು ವಿಂಗಡಣೆ ಮಾಡಬಹುದು.

ಕೃಷಿ ಮಾರಾಟ ಮತ್ತು ಆರ್ಥಿಕ ಅಭಿವೃದ್ಧಿ ಎಂಬ ಗ್ರಂಥದಲ್ಲಿ ಹೆಚ್. ನಾಗರಾಜಶೆಟ್ಟಿಯವರು, ಒಟ್ಟು ಆವಕ, ಪ್ರಾಂಗಣಗಳ ಸಂಖ್ಯೆ, ಕ್ಷೇತ್ರದಲ್ಲಿರುವ ಗ್ರಾಮೀಣ ಸಂತೆಗಳ ಸಂಖ್ಯೆ, ಮಾರುಕಟ್ಟೆಯಲ್ಲಿಯ ಪೇಟೆ ಕಾರ್ಯಕರ್ತರ ಸಂಖ್ಯೆ, ಆವಕದ ಪ್ರಮಾಣ ಮತ್ತು ಆವಕಾಗುತ್ತಿರುವ ಉತ್ಪನ್ನದ ಮೌಲ್ಯಗಳಿಗೆ ಸೂಚ್ಯಂಕ ಕೊಟ್ಟು, ಎ, ಬಿ, ಸಿ, ಡಿ, ಇ, ಎಫ್, ಜಿ ಮತ್ತು ಎಚ್ ಎಂಬ ೮ ವರ್ಗಗಳಾಗಿ ಪೇಟೆಗಳನ್ನು ವಿಂಗಡಣೆ ಮಾಡಿದ್ದಾರೆ.

**೧.೪ ಮಹಾಲಿಂಗಪುರದ ಭೌಗೋಳಿಕ ಲಕ್ಷಣಗಳು :**

ಮಹಾಲಿಂಗಪುರವು ಬಾಗಲಕೋಟ ಜಿಲ್ಲೆಯ ಪಶ್ಚಿಮ ಭಾಗದಲ್ಲಿದೆ. ಇದು ಮುಧೋಳ ತಾಲ್ಲೂಕಿನಲ್ಲಿದ್ದು, ಮುಧೋಳದ ವಾಯುವ್ಯ ಭಾಗದಲ್ಲಿರುತ್ತದೆ. ಮಹಾಲಿಂಗಪುರವು ಅಕ್ಷಾಂಶ

೧೬.೫° ದಲ್ಲಿ ಮತ್ತು ರೇಖಾಂಶ ೭೫° ದಲ್ಲಿ ಬರುತ್ತದೆ. ಕೃಷ್ಣಾ ನದಿಯಿಂದ ೧೦ ಕಿ.ಮೀ. ದೂರದಲ್ಲಿ ದಕ್ಷಿಣ ದಿಕ್ಕಿಗೆ ಹಾಗೂ ಘಟಪ್ರಭಾ ನದಿಯಿಂದ ೮ ಕಿ.ಮೀ. ದೂರದಲ್ಲಿ ಉತ್ತರಕ್ಕೆ ನೆಲೆಸಿದೆ. ೨೦೦೧ ರ ಜನಗಣತಿ ಪ್ರಕಾರ ಮಹಾಲಿಂಗಪುರದ ಜನಸಂಖ್ಯೆ ೩೫,೦೦೦ ಕ್ಕಿಂತ ಅಧಿಕ ಇರುತ್ತದೆ. ಮಹಾಲಿಂಗಪುರದ ವಿಸ್ತೀರ್ಣ ೧೨.೪೫ ಚದರ ಕಿ.ಮೀ. ಇರುತ್ತದೆ. ವಾಡಿಕೆಯಂತೆ ವರ್ಷದಲ್ಲಿ ೩೭ ದಿನಗಳ ಮಳೆ ಬೀಳುತ್ತದೆ. ಮಳೆಯ ವಾಡಿಕೆಯ ಪ್ರಮಾಣ ೫೪೨ ಮಿ.ಮೀ. ಇದ್ದರೆ, ೨೦೦೬-೦೭ ರಲ್ಲಿ ಬಿದ್ದ ಮಳೆಯ ಪ್ರಮಾಣವು ೪೭೮ ಮಿ.ಮೀ. ಇದೆ.

ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದ ವಿಸ್ತೀರ್ಣ ೯೫೪೫೦ ಹೆಕ್ಟರ್ ಇರುತ್ತದೆ. ಈ ವಿಸ್ತೀರ್ಣದಲ್ಲಿ ಬರುವ ಭೂಮಿಯನ್ನು ಬಿತ್ತನೆಗಾಗಿ ೭೫೧೩೮ ಹೆಕ್ಟರ್ ಪ್ರದೇಶವನ್ನು ಉಪಯೋಗಿಸಲಾಗಿದೆ.

ವಾಣಿಜ್ಯ ಬೆಳೆಗಳು : ಕಬ್ಬು, ಅರಿಷಿಣ, ಹತ್ತಿ, ಸೂರ್ಯಪಾನ, ಸೊಯಾಬಿನ್, ಬಾಳೆ ಮುಂತಾದವುಗಳು.

ಆಹಾರ ಧಾನ್ಯಗಳು : ಗೋವಿನಜೋಳ, ಜೋಳ, ಗೋದಿ, ಜವೆಗೋದಿ, ಕಡಲಿ ಮುಂತಾದವು ಬೆಳೆಗಳನ್ನು ಬೆಳೆಯಲಾಗುತ್ತದೆ.

ನೀರಿನ ಮೂಲಗಳು : ಹೊಳೆ, ಹಳ್ಳ, ಘಟಪ್ರಭಾ ಎಡದಂಡೆ ಕಾಲುವೆ, ಬಾಂವಿ, ಕೊಳವೆಬಾಂವಿ ಮುಂತಾದ ನೀರಿನ ಮೂಲಗಳಿವೆ.

ವಾತಾವರಣವು ಋತುಮಾನದ ಅನುಗುಣವಾಗಿ ಬದಲಾವಣೆ ಹೊಂದುತ್ತದೆ. ಸಾಮಾನ್ಯವಾಗಿ ಉಷ್ಣಾಂಶವು ೨೮° ಸೆಲ್‌ಸಿಯಸ್ ಇರುತ್ತದೆ. ಬೇಸಿಗೆಯಲ್ಲಿ ೩೦° ಸೆಲ್‌ಸಿಯಸ್‌ನಿಂದ ೪೦° ಸೆಲ್‌ಸಿಯಸ್‌ವರೆಗೆ ಇರುತ್ತದೆ. ಚಳಿಗಾಲದಲ್ಲಿ ೨೦° - ೨೫° ಸೆಲ್‌ಸಿಯಸ್‌ವರೆಗೆ ಇರುತ್ತದೆ.

**೧.೫ ವಿಷಯ-ವಸ್ತುವಿನ ವಿವರಣೆ :**

'ಕೃಷಿ ಉತ್ಪನ್ನ ಮಾರಾಟದಲ್ಲಿ : ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರ; ಅಭಿವೃದ್ಧಿಯ ಅಧ್ಯಯನ' ಎಂಬ ವಿಷಯವನ್ನು ಅಧ್ಯಯನಕ್ಕಾಗಿ ತೆಗೆದುಕೊಳ್ಳಲಾಗಿದೆ.

ಮಹಾಲಿಂಗಪುರವು ಬಾಗಲಕೋಟ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಬರುತ್ತದೆ. ಇದು ಮುಧೋಳ ತಾಲ್ಲೂಕಿನ ವಾಯುವ್ಯಭಾಗದಲ್ಲಿದ್ದು, ಜಮಖಂಡಿ ಮತ್ತು ಗೋಕಾಕ ಇದರ ಸುತ್ತಮುತ್ತಲಿನ ತಾಲ್ಲೂಕುಗಳು. ಇದು ಕೃಷ್ಣಾ ನದಿಯಿಂದ ಉತ್ತರಕ್ಕೆ ೧೦ ಕಿ.ಮೀ. ಮತ್ತು ಘಟಪ್ರಭಾ ನದಿಯು ದಕ್ಷಿಣಕ್ಕೆ ೮ ಕಿ.ಮೀ. ದೂರದಲ್ಲಿದೆ.

ಮಹಾಲಿಂಗಪುರದಲ್ಲಿ ಪ್ರಧಾನ ಕೃಷಿ ಉತ್ಪನ್ನ ಮಾರುಕಟ್ಟೆ ಇರುತ್ತದೆ. ಮುಧೋಳ ಮತ್ತು ಲೋಕಾಪುರದ ಉಪ-ಮಾರುಕಟ್ಟೆಗಳು ಈ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುತ್ತವೆ.

ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ೦೯-೦೯-೧೯೮೭ ರಂದು ಸ್ಥಾಪನೆ ಮಾಡಲಾಯಿತು. ದಿನಾಂಕ : ೨೪-೧೨-೧೯೮೭ ರಿಂದ ಸ್ವತಂತ್ರ ಮಾರುಕಟ್ಟೆಯಾಗಿ

ಕಾರ್ಯಾರಂಭ ಮಾಡಿತ್ತು. ೧೯೮೭ ರಿಂದ ೨೦೦೦-೦೧ ರವರೆಗೆ ಈ ಮಾರುಕಟ್ಟೆಯ ವಹಿವಾಟು ಏರಿಕೆಯ ಪ್ರವೃತ್ತಿ ಹೊಂದಿತ್ತು. ಆದರೆ ೨೦೦೧-೦೨ ರಿಂದ ೨೦೦೬-೦೭ ರವರೆಗೆ ಮಾರುಕಟ್ಟೆಯ ವಹಿವಾಟುಗಳಲ್ಲಿ ಇಳಿಕೆಯ ಪ್ರವೃತ್ತಿಯನ್ನು ಕಾಣುತ್ತೇವೆ. ೨೦೦೭-೦೮ ರಲ್ಲಿ ವಹಿವಾಟಿನಲ್ಲಿ ಸಮಾಧಾನಕರ ಪ್ರಗತಿಯನ್ನು ಸಾಧಿಸಲಾಗಿದೆ.

ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ವ್ಯಾಪಾರ - ವಹಿವಾಟುಗಳು ಸುಗಮವಾಗಿ ಸಾಗಲು ಅನುಕೂಲವಾಗುವಂತೆ ಮುಖ್ಯ ಮಾರುಕಟ್ಟೆಯನ್ನು ೨೭-೩೬ ಎಕರೆ ಪ್ರದೇಶದಲ್ಲಿ, ಜಾನುವಾರು ಮಾರುಕಟ್ಟೆಯನ್ನು ೭-೨೪ ಎಕರೆ ಪ್ರದೇಶದಲ್ಲಿ, ಮುಧೋಳ ಉಪ-ಮಾರುಕಟ್ಟೆಯನ್ನು ೧೮-೩೨ ಎಕರೆ ಮತ್ತು ಲೋಕಾಪುರ ಉಪ-ಮಾರುಕಟ್ಟೆಯನ್ನು ೮-೧೯ ಎಕರೆ ಪ್ರದೇಶದಲ್ಲಿ ೦೯-೦೯-೧೯೮೭ ರಂದು ಸ್ಥಾಪಿಸಲಾಯಿತು.

ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ವಹಿವಾಟುಗಳು ನಿಯಂತ್ರಣ ಕಾನೂನಿನ ನಿಯಮಗಳಿಗೆ ಅನುಗುಣವಾಗಿ ನಡೆಯುತ್ತವೆ. ಬೆಲ್ಲವನ್ನು ಮುಕ್ತ ಹರಾಜಿನ ಮೂಲಕ ಮಾರಾಟ ಮಾಡಲಾಗುತ್ತಿದೆ. ಹತ್ತಿಯನ್ನು ಟೆಂಡರ್ ಪದ್ಧತಿಯ ಮೂಲಕ ಮತ್ತು ಇನ್ನುಳಿದ ಉತ್ಪನ್ನಗಳನ್ನು ಮಾರುವವರ ಮತ್ತು ಕೊಳ್ಳುವವರ ಪರಸ್ಪರ ಒಪ್ಪಿಗೆಯ ಮೂಲಕ ಮಾರಾಟ ಮಾಡಲಾಗುತ್ತದೆ.

ಈ ಮಾರುಕಟ್ಟೆಯ ಆಡಳಿತ ನೋಡಿಕೊಳ್ಳಲು ಸಮಿತಿಯು ಕಾರ್ಯೋನ್ಮುಖ ವಾಗಿರುತ್ತದೆ. ಸಮಿತಿಗೆ ಸಹಕಾರ ಮತ್ತು ಸಹಾಯ ಒದಗಿಸಲು ಕಛೇರಿಯ ಸಿಬ್ಬಂದಿ ವ್ಯವಸ್ಥೆ ಇದೆ.

ಈ ಮಾರುಕಟ್ಟೆಯಲ್ಲಿ ಪೇಟೆಯ ವಿವಿಧ ಕಾರ್ಯಕರ್ತರ, ರೈತರ ಮತ್ತು ಸಿಬ್ಬಂದಿಯ ಅನುಕೂಲಕ್ಕಾಗಿ ಹಲವಾರು ಸೌಲಭ್ಯಗಳನ್ನು ಒದಗಿಸಲಾಗಿದೆ.

ಈ ರೀತಿಯಾಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರದ ಕ್ಷೇತ್ರದಲ್ಲಿ ಮಾರಾಟದ ಕಾರ್ಯಗಳು ಆಶಾದಾಯಕವಾಗಿವೆ.

**೧.೬ ಅಧ್ಯಯನದ ಉದ್ದೇಶಗಳು :**

ಕೃಷಿ ಉತ್ಪನ್ನಗಳ ಮಾರುಕಟ್ಟೆ ಪ್ರಗತಿಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಪಾತ್ರವನ್ನು ತಿಳಿದುಕೊಳ್ಳುವ ಮೂಲ ಉದ್ದೇಶದಿಂದ ಈ ಅಧ್ಯಯನವನ್ನು ಕೈಕೊಳ್ಳಲಾಗಿದೆ. ಇದು ಸಂಶೋಧನೆಯ ಉದ್ದೇಶವೂ ಆಗಿರುತ್ತದೆ. ಪ್ರಸ್ತುತ ಈ ಅಧ್ಯಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ :

೧) ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸವನ್ನು ತಿಳಿದುಕೊಳ್ಳುವದು.

೨) ಕೃಷಿ ಉತ್ಪನ್ನ ಮಾರುಕಟ್ಟೆಯ ನಿಯಂತ್ರಣ, ನಿಯಂತ್ರಿತ ಮಾರುಕಟ್ಟೆಯ ಲಕ್ಷಣಗಳು ಮತ್ತು ಅಲ್ಲಿರಬೇಕಾದ ಸೌಲಭ್ಯ, ಸೌಕರ್ಯ ಮತ್ತು ಅನುಕೂಲತೆಗಳ ಬಗ್ಗೆ ತಿಳಿದುಕೊಳ್ಳುವದು.

೩.) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ರಚನೆ, ಅದರ ಕರ್ತವ್ಯ ಮತ್ತು ಅಧಿಕಾರಗಳ ಬಗ್ಗೆ ತಿಳಿದುಕೊಳ್ಳುವದು.

೪) ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸದ ಬಗ್ಗೆ, ಈ ಮಾರುಕಟ್ಟೆಯ ಲಕ್ಷಣಗಳನ್ನು ಮತ್ತು ಸೌಲಭ್ಯಗಳ ಅಭಿವೃದ್ಧಿ ಬಗ್ಗೆ ತಿಳಿಯಲು ಸಮಿತಿಯ ರಚನೆ, ಆದರ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ತಿಳಿದುಕೊಳ್ಳುವದು.

೫) ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದಲ್ಲಿ ಬರುವ ಮುಧೋಳ ಮತ್ತು ಲೋಕಾಪುರ ಉಪ-ಮಾರುಕಟ್ಟೆಗಳ ಬಗ್ಗೆ ಮತ್ತು ಗ್ರಾಮೀಣ ಮಾರುಕಟ್ಟೆಗಳ ಅಭಿವೃದ್ಧಿಯ ಬಗ್ಗೆ ತಿಳಿದುಕೊಳ್ಳುವದು.

೬) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಪ್ರಗತಿ ಪರಿಶೀಲನೆ : i) ೨೦೦೦-೦೧ ರಿಂದ ೨೦೦೭-೦೮ ರವರೆಗಿನ ಪೇಟೆ ಕಾರ್ಯಕರ್ತರ ಪ್ರಗತಿ ಪರಿಶೀಲನೆ, ii) ಕ್ರಮಪಡಿಸಿದ ಉತ್ಪನ್ನಗಳ ಆವಕ-ಜಾವಕ ಮತ್ತು ಮಾರಾಟ ಮೌಲ್ಯದ ಪ್ರಗತಿ ಪರಿಶೀಲನೆ, iii) ಕಾರ್ಯ ಕ್ಷಮತೆಯನ್ನು ಪ್ರತಿಬಿಂಬಿಸುವ ಆದಾಯ-ವೆಚ್ಚದ ಪ್ರಗತಿಯ ಪರಿಶೀಲನೆ, iv) ವಿವಿಧ ಅಭಿವೃದ್ಧಿ ಕಾರ್ಯಗಳ ಪರಾಮರ್ಶೆ ಮತ್ತು ಪರಿಶೀಲನೆ.

೭) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಪ್ರಗತಿ ವಿಶ್ಲೇಷಣೆಯಲ್ಲಿ ಕಂಡುಕೊಂಡ ಅಂಶಗಳನ್ನು ತಿಳಿಸುವದು ಮತ್ತು ಸಲಹೆ ಸೂಚನೆಗಳನ್ನು ಕೊಡುವದು.

**೧.೭ ಅಧ್ಯಯನದ ವಿಷಯದ ಸಾಹಿತ್ಯ ಪರಾಮರ್ಶೆ :**

ಈ ಸಂಶೋಧನೆಗೆ ಪೂರಕವಾಗುವ ವಿವಿಧ ಸಂಶೋಧನಾ ಗ್ರಂಥಗಳನ್ನು ಅಭ್ಯಸಿಸಲಾಗಿದೆ. ಕೃಷಿ ಉತ್ಪನ್ನ ಮಾರುಕಟ್ಟೆಗೆ ಸಂಬಂಧಿಸಿದಂತೆ ಎರಡು ಮಹಾ ಪ್ರಬಂಧವನ್ನು, ಎರಡು ಸಂಪ್ರಬಂಧವನ್ನು ಪರಾಮರ್ಶಿಸಲಾಗಿದೆ. ಅವುಗಳಲ್ಲಿ ಡಾ|| ರಮೇಶ (ಎಂ) ಅವರ ಸಂಶೋಧನಾ ಮಹಾಪ್ರಬಂಧ, ಡಾ|| ಸಿ. ಎಂ. ಕಡಕೋಳ ಅವರ ಮಹಾಪ್ರಬಂಧಗಳು ಮುಖ್ಯವಾದವುಗಳು. ಅದರಂತೆ ಸಂಪ್ರಬಂಧಗಳಲ್ಲಿ ಕೃಷ್ಣಾ ಎಸ್. ಎನ್. ಕೂಡ ಒಂದಾಗಿದೆ.

ಡಾ|| ರಮೇಶ (ಎಂ) ೨೦೦೭ ರಲ್ಲಿ, ಡಾ|| ಪಿ. ಎ. ಭಟ್ ಅವರ ಮಾರ್ಗದರ್ಶನದಲ್ಲಿ, ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂದವು "ಮಾರ್ಕೆಟಿಂಗ್ ಆಫ್ ಕರ್ನಾಟಕ : ಎ.ಪಿ.ಎಮ್.ಸಿ. ಯ ಒಂದು ಅಧ್ಯಯನ" ಶೀರ್ಷಿಕೆಯನ್ನು ಹೊಂದಿರುತ್ತದೆ. ಈ ಮಹಾಪ್ರಬಂಧದಲ್ಲಿ ಕರ್ನಾಟಕದಲ್ಲಿಯ ಮಾರುಕಟ್ಟೆಗಳ ಸ್ಥಿತಿ-ಗತಿಗಳ ಬಗ್ಗೆ, ಅಲ್ಲಿನ ಆವಕ-ಜಾವಕ ಸರಕುಗಳ ಬಗ್ಗೆ, ಉತ್ಪನ್ನಗಳ ಮೌಲ್ಯಗಳ ಬಗ್ಗೆ ಮತ್ತು ಬೆಳವಣಿಗೆ ದರದ ವಿಷಯಗಳ ಬಗ್ಗೆ ವಿಷದವಾಗಿ ವಿವರಿಸಿದ್ದಾರೆ.

ಡಾ|| ಸಿ. ಎಂ. ಕಡಕೋಳವರು ಸಲ್ಲಿಸಿದ ಮಹಾಪ್ರಬಂಧದಲ್ಲಿ ಹುಬ್ಬಳ್ಳಿ ಜಿಲ್ಲೆಯಲ್ಲಿಯ ಕೃಷಿ ಉತ್ಪನ್ನ ಮಾರುಕಟ್ಟೆಗಳ ಬಗ್ಗೆ ಸವಿಸ್ತಾರವಾದ ಅಧ್ಯಯನ ಮಾಡಿದ್ದಾರೆ.

ಕೃಷ್ಣಾ ಎಸ್. ಎನ್. ಅವರ ತಮ್ಮ ಸಂಪ್ರಬಂಧವನ್ನು, ಡಾ|| ಎಸ್. ಎಸ್. ಹೂಗಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. 'ಹಳಿಯಾಳದ ಕೃಷಿ ಉತ್ಪನ್ನ ಮಾರುಕಟ್ಟೆ - ಅಧ್ಯಯನ' ಎಂಬ ಸಂಪ್ರಬಂಧದಲ್ಲಿ ಆ ಮಾರುಕಟ್ಟೆಯ

ಅಭಿವೃದ್ಧಿ ಬಗ್ಗೆ ಅಧ್ಯಯನ ಮಾಡುವಾಗ ಪ್ರಶ್ನಾವಳಿ ಮೂಲಕ ಮಾಹಿತಿ ಕಲೆ ಹಾಕಿದ್ದಾರೆ. ಹಾಗೂ ಕೃಷಿ ಉತ್ಪನ್ನ ಮಾರುಕಟ್ಟೆ, ಹಳಿಯಾಳದ ಪ್ರಗತಿ ಪರಿಶೀಲನೆ ಮಾಡಿದ್ದಾರೆ.

**೧.೮ ಸಂಶೋಧನಾ ವಿಧಾನ :**

ಈ ಸಂಶೋಧನಾ ಅಧ್ಯಯನ ಕೈಕೊಳ್ಳಲು ಬಹುಪಾಲು ಮಾಹಿತಿಯನ್ನು ಅನುಷಂಗಿಕ ವಿಧಾನದಿಂದ ಸಂಗ್ರಹಿಸಲಾಗಿದೆ. ಕೆಲವೊಮ್ಮೆ ಸಂದರ್ಶನದ ಮೂಲಕ ಮಾಹಿತಿ ಕಲೆ ಹಾಕಲಾಗಿದೆ. ಅಧ್ಯಯನಕ್ಕೆ ಬೇಕಾದ ಮಾಹಿತಿಯನ್ನು ಕೃಷಿ ಉತ್ಪನ್ನ ಮಾರುಕಟ್ಟೆಯ ಕಚೇರಿಯಿಂದ ಪಡೆದುಕೊಳ್ಳಲಾಗಿದೆ. ಸಮಿತಿಯು ಪ್ರಕಟಿಸಿದ ವಾರ್ಷಿಕ ವರದಿ, ಅಪ್ರಕಟಿತವಾದ ಆದರೆ ಕಚೇರಿಯ ದಸ್ತಾವೇಜುಗಳ ಮೂಲದಿಂದ ಪಡೆದ ಮಾಹಿತಿ ಮತ್ತು ಸಂಕ್ಷಿಪ್ತ ವರದಿಯನ್ನು ಆಧರಿಸಿ ಅಧ್ಯಯನ ಕೈಕೊಳ್ಳಲಾಗಿದೆ. ಕೆಲವು ಮಾಹಿತಿಯನ್ನು ಬಿಜಾಪುರ ಜಿಲ್ಲಾ ಗೆಜೆಟಿಯರ್ ದಿಂದ ಮತ್ತು ಅಂತರ್‌ಜಾಲದ ಸಹಾಯದಿಂದ ಪಡೆದುಕೊಳ್ಳಲಾಗಿದೆ.

ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಸಂಖ್ಯಾಶಾಸ್ತ್ರದ ಹಲವಾರು ಸಾಧನಗಳನ್ನು ಬಳಸಿ ವಿಶ್ಲೇಷಿಸಲಾಗಿದೆ. ಮಾಹಿತಿ ವಿಶ್ಲೇಷಣೆಗಾಗಿ ಕೋಷ್ಟಕಗಳನ್ನು, ರೇಖಾಚಿತ್ರಗಳಾದ ಸರಳ ಸ್ಥಂಬಾ ಚಿತ್ರ, ಬಹುಸ್ಥಂಬಾ ರೇಖಾಚಿತ್ರ ಮತ್ತು ವೃತ್ತ ಖಂಡಾ ಚಿತ್ರಗಳನ್ನು ಬಳಸಲಾಗಿದೆ. ಕೆಲವು ಬಾರಿ ಪ್ರತಿಶತ ಪ್ರಮಾಣ ಮತ್ತು ಬೆಳವಣಿಗೆ ದರ ಕಂಡುಹಿಡಿಯಲು ಗಣಿತ ಶಾಸ್ತ್ರದ ಸೂತ್ರಗಳನ್ನು ಬಳಸಲಾಗಿದೆ.

ಹೀಗೆ ಸಮಗ್ರ ಅಧ್ಯಯನವು ಪ್ರಕಟಿತ ಮತ್ತು ಅಪ್ರಕಟಿತ ದಾಖಲೆಗಳಿಂದ, ಸಂದರ್ಶನದ ಮೂಲಕ, ಅಂತರ್‌ಜಾಲದ ಸಂಪರ್ಕದಿಂದ ದೊರೆತ ಮಾಹಿತಿಗಳಿಂದ ವಿಶ್ಲೇಷಿಸಲಾಗಿದೆ.

## ಅಧ್ಯಯನದ ವಿನ್ಯಾಸ

**೧.೯ ಅಧ್ಯಯನದಲ್ಲಿ ಒಳಗೊಂಡಿರುವ ಅಧ್ಯಾಯಗಳು :**

ಈ ಸಂಶೋಧನೆಯನ್ನು ಮುಖ್ಯವಾಗಿ ಐದು ಅಧ್ಯಾಯಗಳನ್ನಗಿ ಕೈಗೊಳ್ಳಲಾಗಿದೆ.

**ಅಧ್ಯಾಯ ಒಂದು : ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ :**

ಇದರಲ್ಲಿ ಕೃಷಿ ಮಾರುಕಟ್ಟೆಯ ಪದ್ಧತಿಯ ಬಗೆಗಿನ ವಿಷಯ, ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಸ್ಥಿತಿ-ಗತಿ, ಕೃಷಿ ಉತ್ಪನ್ನ ಮಾರುಕಟ್ಟೆಗಳ ವಿಂಗಡಣೆ, ಮಹಾಲಿಂಗಪುರದ ಭೌಗೋಳಿಕ ಲಕ್ಷಣಗಳು, ಅಧ್ಯಯನದ ವಿಷಯ - ವಸ್ತುವಿನ ವಿವರಣೆ, ಅಧ್ಯಯನದ ಉದ್ದೇಶಗಳು, ಸಂಶೋಧನಾ ವಿಷಯದ ಸಾಹಿತ್ಯ - ಪರಾಮರ್ಶೆ, ಸಂಶೋಧನಾ ವಿಧಾನ, ಅಧ್ಯಯನದ ವಿನ್ಯಾಸ, ಅಧ್ಯಯನದ ಪ್ರಾಮುಖ್ಯತೆ ಮತ್ತು ಅಧ್ಯಯನದ ನಿಬಂಧನೆಗಳ ಬಗೆಗಿನ ವಿಷಯಗಳನ್ನು ಒಳಗೊಂಡಿರುತ್ತದೆ.

**ಅಧ್ಯಾಯ ಎರಡು : ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ :**

ಈ ಅಧ್ಯಾಯದಲ್ಲಿ ನಿಯಂತ್ರಿತ ಮಾರುಕಟ್ಟೆಯ ಅರ್ಥ ಮತ್ತು ವ್ಯಾಪ್ತಿ, ಭಾರತದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ನಿಯಂತ್ರಣ, ನಿಯಂತ್ರಿತ ಮಾರುಕಟ್ಟೆಯ ಉದ್ದೇಶಗಳು, ಅದರ

ಲಕ್ಷಣಗಳು, ಕೃಷಿ ಉತ್ಪನ್ನ ನಿಯಂತ್ರಿತ ಮಾರುಕಟ್ಟೆಯಲ್ಲಿ ಬಳಸಲಾಗುತ್ತಿರುವ ವಿವಿಧ ಪದಗಳ ವ್ಯಾಖ್ಯೆ, ಕೃಷಿ ಉತ್ಪನ್ನ ಮಾರುಕಟ್ಟೆಯ ಸಮಿತಿ, ಅದರ ರಚನೆ, ಹಕ್ಕು ಮತ್ತು ಕರ್ತವ್ಯಗಳು ಹಾಗೂ ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿನ ಸೌಲಭ್ಯಗಳ ಬಗೆಗಿನ ವಿಷಯಗಳನ್ನು ಒಳಗೊಂಡಿರುತ್ತದೆ.

**ಅಧ್ಯಾಯ ಮೂರು : ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ :**

ಈ ಅಧ್ಯಾಯದಲ್ಲಿ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ, ಮುಖ್ಯ ಮಾರುಕಟ್ಟೆಯಾಗಿ ಕಾರ್ಯನಿರ್ವಹಣೆ, ಇದರ ಉಪ-ಮಾರುಕಟ್ಟೆಗಳು, ಮಹಾಲಿಂಗಪುರದ ನಿತ್ಯದ ಮಾರ್ಕೆಟ್ ಮತ್ತು ಸಂತೆ, ಜಾನುವಾರು ಮಾರುಕಟ್ಟೆ, ಮಾರುಕಟ್ಟೆಯ ಲಕ್ಷಣಗಳು, ಸೌಲಭ್ಯಗಳು ಮತ್ತು ಅಭಿವೃದ್ಧಿ ಕಾರ್ಯಗಳನ್ನು ಒಳಗೊಂಡಿರುತ್ತದೆ.

**ಅಧ್ಯಾಯ ನಾಲ್ಕು : ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಪ್ರಗತಿ ಪರಿಶೀಲನೆ :**

ಈ ಅಧ್ಯಾಯದಲ್ಲಿ ಪೇಟೆ ಕಾರ್ಯಕರ್ತರ ಬಗ್ಗೆ, ಕೃಷಿ ಉತ್ಪನ್ನಗಳ ಆವಕ ಮತ್ತು ಮಾರಾಟ ಮೌಲ್ಯ, ಆದಾಯ, ವೆಚ್ಚ ಮತ್ತು ನಿವ್ವಳ ಉಳಿತಾಯಗಳ ಬೆಳವಣಿಗೆದರ, ಮಾರುಕಟ್ಟೆಯ ಪ್ರವೃತ್ತಿಯ ಬಗೆಗಿನ ವಿಷಯಗಳ ವಿಶ್ಲೇಷಣೆಯನ್ನು ಒಳಗೊಂಡಿರುತ್ತದೆ.

**ಅಧ್ಯಾಯ ಐದು : ಸಮಸ್ತ ಅಧ್ಯಯನದ ಒಟ್ಟು ಫಲಿತಾಂಶ :**

ಈ ಅಧ್ಯಾಯದಲ್ಲಿ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಕಂಡುಕೊಂಡ ಅಂಶಗಳು ಮತ್ತು ಸಲಹೆಗಳನ್ನು ಒಳಗೊಂಡಿರುತ್ತದೆ.

**೧.೧೦ ಅಧ್ಯಯನದ ಪ್ರಾಮುಖ್ಯತೆ :**

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಅಭಿವೃದ್ಧಿಯ ಅಧ್ಯಯನವು ಬಹಳ ಪ್ರಸ್ತುತವಾಗಿದೆ. ಈ ಅಧ್ಯಯನದಿಂದ ಈ ಭಾಗದಲ್ಲಿರುವ ವಿವಿಧ ಜನರಿಗೆ ಹೇಗೆ ಪ್ರಯೋಜನಕಾರಿಯಾಗಿದೆ ಎಂಬುದನ್ನು ಸ್ಪಷ್ಟಪಡಿಸಲಾಗುತ್ತದೆ. ಈ ಅಧ್ಯಯನವು ೧) ರೈತ ಸಮುದಾಯಕ್ಕೆ, ೨) ಪೇಟೆಕಾರ್ಯಕರ್ತರಿಗೆ ೩) ಸಮಾಜಕ್ಕೆ ಮತ್ತು ೪) ಜ್ಞಾನ ಸಂಪತ್ತಿಗೆ ಯಾವ ರೀತಿ ಕೊಡುಗೆ ಕೊಡುತ್ತದೆ ಎಂದು ತಿಳಿಸಲಾಗುತ್ತದೆ.

**೧) ರೈತ ಸಮುದಾಯಕ್ಕಾಗುವ ಪ್ರಯೋಜನಗಳು :**

೧) ಅಧ್ಯಯನದಿಂದ ರೈತರಲ್ಲಿ ಪೇಟೆಯ ವಹಿವಾಟುಗಳ ಬಗ್ಗೆ ಮತ್ತು ರೂಢಿಗಳ ಬಗ್ಗೆ ಜಾಗೃತಿಯನ್ನು ಮೂಡಿಸುತ್ತದೆ.

೨) ಅಧ್ಯಯನವು ರೈತರಿಂದ, ರೈತರಿಗಾಗಿರುವ ಮಾರುಕಟ್ಟೆಯಲ್ಲಿ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವದರಿಂದ ದೊರೆಯುವ ಪ್ರಯೋಜನಗಳ ಬಗ್ಗೆ ತಿಳಿಸುತ್ತದೆ.

೩) ರೈತರಿಗೆ ವ್ಯವಸಾಯದ ಚುಟವಟಿಕೆಗಳಿಗೆ ಬೇಕಾಗುವ ಸುಧಾರಿತ ತಂತ್ರಜ್ಞಾನ, ಬೀಜಗಳು ಮತ್ತು ರಾಸಾಯನಿಕ ಗೊಬ್ಬರ ಮುಂತಾದವುಗಳನ್ನು ಯೋಗ್ಯದರದಲ್ಲಿ ಉತ್ತಮ ಗುಣಮಟ್ಟದಲ್ಲಿ ಹೂಡುವಳಿಗಳು ಸಕಾಲದಲ್ಲಿ ದೊರೆಯುವಂತೆ ಮಾಡಲು ಈ ಅಧ್ಯಯನವು ಮಹತ್ವದಾಗಿದೆ.

೪) ಕೃಷಿಕರಲ್ಲಿ ಜಾಗ್ರತೆಯನ್ನು ಮೂಡಿಸಲು ಮತ್ತು ಒತ್ತಾಯದ ಮಾರಾಟ, ಅನಾನುಕೂಲ ಪರಿಸ್ಥಿತಿ, ಅನಾನುಕೂಲ ಬೆಲೆಯಲ್ಲಿ ಮಾರಾಟ ಮಾಡದಂತೆ ತಿಳುವಳಿಕೆ ನೀಡುತ್ತದೆ.

**೨) ಪೇಟೆ ಕಾರ್ಯಕರ್ತರಿಗೆ :**

i) ಈ ಅಧ್ಯಯನವು ಪೇಟೆ ಕಾರ್ಯಕರ್ತರಿಗೆ ನ್ಯಾಯಬದ್ಧ ಮಾರಾಟ ಮತ್ತು ಕೊಳ್ಳುವ ಪದ್ಧತಿಗಳನ್ನು ತಿಳಿಸಿ ಹೇಳುತ್ತದೆ.

ii) ಮಾರುಕಟ್ಟೆಯಲ್ಲಿ ವ್ಯವಹಾರದ ರೂಢಿಗಳಿಗೆ ಅನುಗುಣವಾಗಿ ಚಟುವಟಿಕೆಗಳನ್ನು ಕೈಕೊಳ್ಳುವಂತೆ ತಿಳುವಳಿಕೆ ನೀಡುತ್ತದೆ.

iii) ಈ ಅಧ್ಯಾಯ ಮಾರಾಟದ ಬೆಲೆಯನ್ನು ಸಂದಾಯ ಮಾಡುವ ನವೀನ ವಿಧಾನವಾದ 'ಕ್ಲಿಯರಿಂಗ್ ಹೌಸ್'ದ ಬಗ್ಗೆ ಅರಿಕೆ ಮೂಡಿಸಿ, ಮಾರಾಟಗಾರರಿಗೆ ಆಗುವ ತೊಂದರೆಗಳನ್ನು ನಿವಾರಿಸಲು ಸಹಾಯಕಾರಿಯಾಗಿದೆ.

iv) ಈ ಅಧ್ಯಾಯವು ಪೇಟೆಯ ಕಾರ್ಯಕರ್ತರಲ್ಲಿ ಜವಾಬ್ದಾರಿಯನ್ನು ಮೂಡಿಸಿ, ವ್ಯವಸ್ಥೆಗೆ ಅನುಗುಣವಾಗಿ ವ್ಯವಹರಿಸುವಂತೆ ಪ್ರಜ್ಞೆ ಬೆಳೆಸುತ್ತದೆ.

**೩)** ಸಮಾಜದಲ್ಲಿ ಉತ್ತಮ ವಾತಾವರಣ ನಿರ್ಮಿಸುವ, ಮಾರಾಟದ ಪ್ರಕ್ರಿಯೆ ಬಗ್ಗೆ ತಿಳಿಸಿ ಹೇಳುವ, ನ್ಯಾಯಬದ್ಧ ವಹಿವಾಟುಗಳಿಂದ ಎಲ್ಲ ವರ್ಗದ ಜನರಿಗೆ ಹೇಗೆ ಪ್ರಯೋಜನಕಾರಿಯಾಗಿದೆ ಎಂದು ತಿಳಿಸಿ ಹೇಳುತ್ತದೆ.

**೪)** ಜ್ಞಾನ ಸಂಪತ್ತಿನ ಸಮುದ್ರಕ್ಕೆ ಈ ಅಧ್ಯಯನವು ಒಂದು ತೊಟ್ಟು ನೀರು ಸೇರಿಸಿದಂತೆ ವೃದ್ಧಿಯಾಗಲು ಸಹಕಾರಿಯಾಗಿದೆ.

**೧.೧೧ ಅಧ್ಯಯನದ ನಿಬಂಧನೆಗಳು (ಇತಿ-ಮಿತಿಗಳು)**

ಈ ಅಧ್ಯಯನವನ್ನು ಕೆಲವೊಂದು ಇತಿ-ಮಿತಿಗಳ ಚೌಕಟ್ಟಿನಲ್ಲಿ ಕೈಕೊಳ್ಳಲಾಗಿದೆ. ಆ ನಿಬಂಧನೆಗಳು ಸಂಶೋಧನಾ ಅಧ್ಯಯನದ ವ್ಯಾಪ್ತಿಯನ್ನು ನಿರ್ಧರಿಸುವ ನಿರ್ಧಾರಗಳಾಗಿವೆ. ಅಧ್ಯಯನದ ಇತಿ-ಮಿತಿಗಳು ಇಂತಿವೆ :

೧) ಅಧ್ಯಯನಕ್ಕಾಗಿ ಲಭಿಸಿರುವ ಸಮಯ,

೨) ಅಧ್ಯಯನದ ಅವಧಿ

೩) ಉತ್ಪನ್ನಗಳ ಬೆಳವಣಿಗೆ ದರ ವಿಶ್ಲೇಷಿಸುವದರ ಮಿತಿ

೪) ಪ್ರದೇಶದ ನಿಬಂಧನೆ

೫) ಪೇಟೆ ಕಾರ್ಯಕರ್ತರ ಪರಿಶೀಲನೆ ನಿಬಂಧನೆ.

**೧) ಅಧ್ಯಯನಕ್ಕೆ ಲಭಿಸಿರುವ ಸಮಯದ ನಿಬಂಧನೆ :** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಎಂ.ಫಿಲ್. ಪರೀಕ್ಷೆಗಳ ಫಲಿತಾಂಶ ಪ್ರಕಟಿಸಿದ ಕೇವಲ ಒಂದು ತಿಂಗಳದ ಸಮಯದಲ್ಲಿ ಸಂಶೋಧನಾ ಪ್ರಬಂಧವನ್ನು ಮಂಡಿಸುವಂತೆ ನಿಗದಿ ಮಾಡಿತು. ಇಷ್ಟು ಕಡಿಮೆ ಅವಧಿಯಲ್ಲಿ

ಸಂಪ್ರಬಂಧವನ್ನು ರಚಿಸುವದು ಮತ್ತು ಸಲ್ಲಿಸುವಂತೆ ಸುತ್ತೋಲೆಯನ್ನು ಹೊರಡಿಸಿತು. ಮೂರು ತಿಂಗಳದ ಅವಧಿ ನೀಡಿದ್ದರೆ ಅನುಕೂಲವಾಗುತ್ತಿತ್ತು.

**೨) ಅಧ್ಯಯನದ ಅವಧಿ :** ಸಂಶೋಧನೆಗಾಗಿ ೨೦೦೦-೦೧ ರಿಂದ ೨೦೦೭-೦೮ ರ ಅವಧಿಯಲ್ಲಿನ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಅಭಿವೃದ್ಧಿಯನ್ನು ಪರಿಶೀಲಿಸಲಾಗಿದೆ. ಈ ೮ ವರ್ಷದ ಅವಧಿಯಲ್ಲಿನ ದತ್ತಾಂಶಗಳ ಆಧಾರದ ಮೇಲೆ ಸಂಪ್ರಬಂಧವನ್ನು ರಚಿಸಲಾಗಿದೆ.

೩) ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ೨೦೦೦-೦೧ ರಿಂದ ೨೦೦೬-೦೭ ರವರೆಗೆ ಒಟ್ಟು ೧೮ ಉತ್ಪನ್ನಗಳನ್ನು ವ್ಯವಹರಿಸುವದಕ್ಕಾಗಿ ನಿಯಂತ್ರಣಕ್ಕೆ ಒಳಪಡಿಸಲಾಗಿತ್ತು. ಆದರೆ ಅವುಗಳ ಬೆಳವಣಿಗೆ ದರ ಮತ್ತು ಪ್ರತಿಶತ ಪ್ರಮಾಣ ಕಂಡುಕೊಳ್ಳಲು ಕೇವಲ ೮ ಮುಖ್ಯ ಉತ್ಪನ್ನಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಯಾಕೆಂದರೆ ಅವುಗಳ ಸರಾಸರಿ ಪ್ರಮಾಣವು ಶೇ. ೮೦ ಕ್ಕಿಂತ ಅಧಿಕವಿದೆ.

೪) ಈ ಅಧ್ಯಯನವು ಕೃಷಿ ಉತ್ಪನ್ನ ಮಾರುಕಟ್ಟೆ ಮಹಾಲಿಂಗಪುರ ಕ್ಷೇತ್ರದಲ್ಲಿ ಬರುವ ಮುಖ್ಯ ಮಾರುಕಟ್ಟೆ ಮತ್ತು ಉಪಮಾರುಕಟ್ಟೆಗಳನ್ನು ಮಾತ್ರ ಆಧರಿಸಿ ಅಭ್ಯಸಿಸಲಾಗಿದೆ. ಈ ಕ್ಷೇತ್ರದಲ್ಲಿ ಬರುವ ಗ್ರಾಮೀಣ ಸಂತೆಗಳ ಅಭಿವೃದ್ಧಿಯ ಬಗ್ಗೆ ತಿಳಿಸಲಾಗಿದೆ.

೫) ಅಧ್ಯಯನದ ಅವಧಿಯಲ್ಲಿ ೧೫ ವರ್ಗದ ಪೇಟೆ ಕಾರ್ಯಕರ್ತರು ಕಾರ್ಯ ಪ್ರವೃತ್ತರಾಗಿದ್ದರೂ, ಕೇವಲ ೮ ವರ್ಗದವರನ್ನು ಪರಿಗಣಿಸಲಾಗಿದೆ. ಯಾಕೆಂದರೆ ಈ ೮ ವರ್ಗದ ಪೇಟೆ ಕಾರ್ಯಕರ್ತರು ಒಟ್ಟು ಪೇಟೆ ಕಾರ್ಯಕರ್ತರ ಶೇ. ೮೫ ಕ್ಕಿಂತ ಅಧಿಕ ಪ್ರಮಾಣದಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ.

**೧.೧೨ ಉಪ ಸಂಹಾರ**

ಈ ಅಧ್ಯಾಯವು ಇಡೀ ಸಂಪ್ರಬಂಧದ ರೂಪ-ರೇಷೆಗಳನ್ನು ಸಂಕ್ಷಿಪ್ತವಾಗಿ ಮತ್ತು ನಿಖರವಾಗಿ ಪ್ರಚುರ ಪಡಿಸುತ್ತದೆ. ಇದರಲ್ಲಿ ಸೂಚಿಸಿದ ಅಧ್ಯಾಯಗಳ ವಿನ್ಯಾಸದ ಪ್ರಕಾರವೇ ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಸಂಬಂಧಿಸಿದ ವಿಷಯಗಳನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ.ಅವಶ್ಯವಿರುವಲ್ಲಿ ವಿಶ್ಲೇಷಣೆಗಳನ್ನು ಸಹ ನೀಡಲಾಗಿದೆ.

**ಕೊನೆ ಟಿಪ್ಪಣೆ**

೧. **ಕೃಷಿ ಮಾರುಕಟ್ಟೆ ;** ಎಚ್. ಆರ್.ಕೃಷ್ಣಯ್ಯಗೌಡ,(೨೦೦೦-೦೧),ಪು.೧

# ಅಧ್ಯಾಯ ಎರಡು
# ಕೃಷಿ ಉತ್ಪನ್ನ ಮಾರುಕಟ್ಟೆ ಉಗಮ ಹಾಗೂ ವಿಕಾಸ

## ಅಧ್ಯಾಯ ಎರಡು :

# ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ) ಉಗಮ ಹಾಗೂ ವಿಕಾಸ

**೨.೧ ಪೀಠಿಕೆ (ಪ್ರವೇಶ)** : ಈ ಅಧ್ಯಾಯದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಅರ್ಥ ಮತ್ತು ವ್ಯಾಪ್ತಿ, ಉಗಮ ಹಾಗೂ ವಿಕಾಸ, ಮಾರುಕಟ್ಟೆ ಸಮಿತಿಯ ಹಕ್ಕು ಮತ್ತು ಕರ್ತವ್ಯಗಳು, ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ವ್ಯವಹರಿಸುವ ಉತ್ಪನ್ನಗಳು (ಸಂಖ್ಯೆ), ಮಾರುಕಟ್ಟೆಯ ಕಾರ್ಯಕರ್ತರು ಹಾಗೂ ಮಾರುಕಟ್ಟೆಯ ಸೌಲಭ್ಯಗಳ ಬಗೆಗೆ ವಿವರಿಸಲಾಗುತ್ತದೆ.

**೨.೨ ಕೃಷಿ ಉತ್ಪನ್ನ ಮಾರುಕಟ್ಟೆಯ ಅರ್ಥ ಮತ್ತು ವ್ಯಾಪ್ತಿ :**

ಕೃಷಿ ಉತ್ಪನ್ನ ಮಾರುಕಟ್ಟೆ ನಿಯಂತ್ರಣದ ಬಗ್ಗೆ ತಿಳಿಯುವ ಮುನ್ನ, ಕೃಷಿ ಮಾರುಕಟ್ಟೆಯ ಅರ್ಥವನ್ನು ತಿಳಿದುಕೊಳ್ಳುವದು ಅತೀ ಅವಶ್ಯವಾಗಿದೆ. ಕೃಷಿ ಮಾರುಕಟ್ಟೆ ಎಂಬ ಪರಿಭಾಷೆಯು ಎರಡು ಪದಗಳನ್ನು ಒಳಗೊಂಡಿದೆ. ಅವುಗಳೆಂದರೆ : ೧) ಕೃಷಿ ಮತ್ತು ೨) ಮಾರುಕಟ್ಟೆ. ಕೃಷಿ ಎಂಬ ಪದವನ್ನು ಸಾರ್ವತ್ರಿಕವಾಗಿ ಬೆಳೆಗಳನ್ನು ಬೆಳೆಯುವಿಕೆ ಮತ್ತು ಜಾನುವಾರುಗಳನ್ನು ಸಾಕುವಿಕೆಯ ಕಾರ್ಯಗಳಿಗೆ ಬಳಸಲಾಗುತ್ತದೆ. ಮಾರುಕಟ್ಟೆಯ ಕಾರ್ಯವು ಉತ್ಪನ್ನಗಳನ್ನು ಉತ್ಪಾದನೆಯ ಸ್ಥಳಗಳಿಂದ ಅನುಭೋಗದ ಸ್ಥಳಗಳಿಗೆ ಸಾಗಿಸಿ ಅವುಗಳನ್ನು ಮಾರಾಟಮಾಡುವದಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ.

ಭೂಮಿಯನ್ನು ಕೃಷಿ ಚಟುವಟಿಕೆಯ ಕಾರ್ಯಕ್ಕಾಗಿ ಉಪಯೋಗಿಸಿ, ಅಂದರೆ ಈ ಕಾರ್ಯವು ಬೆಳೆಯನ್ನು ಬೆಳೆಯುವದಕ್ಕಾಗಿ ಉಳುಮೆ ಮಾಡುವ, ನೇಗಿಲ ಹೊಡೆಯುವ, ಬಿತ್ತುವ, ಉತ್ತುವ ಮುಂತಾದ ಮೂಲ ಕಾರ್ಯಗಳನ್ನು ಕೈಕೊಳ್ಳುವ ಹಾಗೂ ನೀರು ಹಾಯಿಸುವ, ಕಳೆ ತೆಗೆಯುವ, ಕ್ರಿಮಿನಾಶ ಪಡಿಸುವ, ಬೆಳೆ ಕೊಯ್ಲುಪೂರ್ವದ ಮತ್ತು ಕೊಯ್ಲಿನ ನಂತರ ಇತರ ಕಾರ್ಯಗಳನ್ನು ಒಳಗೊಂಡಿರುತ್ತದೆ.

'ಕೃಷಿ ಉತ್ಪನ್ನ'ವೆಂದರೆ ಮೇಲಿನ ಕಾರ್ಯಗಳನ್ನು ಕೈಕೊಂಡ ನಂತರ ಬರುವ ಹುಟ್ಟುವಳಿ ಮತ್ತು ಜಾನುವಾರು ಸಾಕಾಣಿಕೆಯಿಂದ ಲಭಿಸುವ ಉತ್ಪತ್ತಿಗಳನ್ನು ಒಳಗೊಂಡಿರುತ್ತದೆ.

ಥಾಮ್ಸನ್‌ರವರ ಅಭಿಪ್ರಾಯದಲ್ಲಿ "ಕೃಷಿ ಮಾರುಕಟ್ಟೆಯ ಅಧ್ಯಯನವು ವ್ಯವಸಾಯೋತ್ಪನ್ನಗಳನ್ನು, ಕಚ್ಚಾ ವಸ್ತುಗಳನ್ನು ಮತ್ತು ಅವುಗಳಿಂದ ನಿಷ್ಪನ್ನಗೊಂಡಿರುವ ಜವಳಿ ಮುಂತಾದ ಸರಕುಗಳನ್ನು ಹೊಲ-ಗದ್ದೆಗಳಿಂದ ಅಂತಿಮ ಅನುಭೋಗಿಗಳಿಗೆ ಸಾಗಿಸುವದಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಾಚರಣೆಗಳು ಮತ್ತು ಅವುಗಳನ್ನು ನಿರ್ವಹಿಸುವ ಸಂಸ್ಥೆಗಳನ್ನು ಹಾಗೂ ಕೃಷಿಕರ, ಮಧ್ಯವರ್ತಿಗಳ ಮತ್ತು ಅನುಭೋಗಿಗಳ ಮೇಲೆ ಈ ಕಾರ್ಯಾಚರಣೆಗಳ ಪರಿಣಾಮಗಳನ್ನು ಒಳಗೊಳ್ಳುತ್ತದೆ."[೧]

ಕೃಷಿಯ ಮೇಲಿನ ರಾಷ್ಟ್ರೀಯ ಆಯೋಗದ ಪ್ರಕಾರ "ಕೃಷಿ ಮಾರುಕಟ್ಟೆಯ ಪ್ರಕ್ರಿಯೆಯು ಮಾರಾಟ ಮಾಡಬಹುದಾದ ಕೃಷಿ ಸರಕುಗಳನ್ನು ಉತ್ಪಾದಿಸುವ ನಿರ್ಣಯದೊಂದಿಗೆ ಪ್ರಾರಂಭವಾಗುತ್ತದೆ. ತಾಂತ್ರಿಕ ಮತ್ತು ಆರ್ಥಿಕ ಪರಿಗಣನೆಯನ್ನು ಆಧರಿಸಿ, ಮಾರುಕಟ್ಟೆಯ ರಚನೆ ಅಥವಾ ವ್ಯವಸ್ಥೆಯ ಕಾರ್ಯಾನುಗುಣ ಮತ್ತು ಸಾಂಸ್ಥಿಕ ಈ ಎರಡಕ್ಕೂ

ಸಂಬಂಧಿಸಿದ ಎಲ್ಲ ವಿಷಯಗಳನ್ನು ಒಳಗೊಳ್ಳುತ್ತದೆ. ಮತ್ತು ಸುಗ್ಗಿಯ ಪೂರ್ವದ ಮತ್ತು ಸುಗ್ಗಿಯ ನಂತರದ ಕಾರ್ಯಾಚರಣೆಗಳನ್ನು, ಅಂದರೆ ಒಟ್ಟುಗೂಡಿಸುವಿಕೆ ಗುಣದರ್ಜೆ ವಿಂಗಡಣೆ, ಸಂಗ್ರಹಣೆ, ಸಾರಿಗೆ ಮತ್ತು ವಿತರಣೆಯಂತಹ ಕಾರ್ಯಗಳನ್ನು ಒಳಗೊಳ್ಳುತ್ತದೆ."[೨]

ಹೀಗೆ ಕೃಷಿ ಮಾರುಕಟ್ಟೆಯು ರೈತರಿಂದ ಬೇಸಾಯ ಹೂಡುವಳಿಗಳ ಸಂಗ್ರಹಣೆ ಮತ್ತು ಹೊಲಗದ್ದೆಗಳಿಂದ ಅನುಭೋಗಿಗಳಿರುವ ಸ್ಥಳಕ್ಕೆ ಕೃಷಿ ವಸ್ತುಗಳ ಸಾಗಾಣಿಕೆ ಇವುಗಳಿಗೆ ಸಂಬಂಧಿಸಿದ ಚಟುವಟಿಕೆಗಳ, ಸಂಸ್ಥೆಗಳ ಮತ್ತು ನೀತಿಗಳ ಅಧ್ಯಯನವಾಗಿದೆ. ಕೃಷಿ ಮಾರುಕಟ್ಟೆಯ ವ್ಯವಸ್ಥೆಯು ವ್ಯವಸಾಯ ಕ್ಷೇತ್ರ ಮತ್ತು ವ್ಯವಸಾಯೇತರ ಕ್ಷೇತ್ರಗಳ ನಡುವಿನ ಕೊಂಡಿಯಾಗಿದೆ. ಸಂಸ್ಕರಣ ಕೈಗಾರಿಕೆಗಳಿಗೆ ಕೃಷಿ ಕಚ್ಚಾ ಸರಕುಗಳ ಪೂರೈಕೆಯ ವ್ಯವಸ್ಥೆ, ವ್ಯವಸಾಯಕ್ಕೆ ಅಗತ್ಯವಾದ ಹೂಡುವಳಿಗಳ ಮತ್ತು ಕಚ್ಚಾ ವಸ್ತುಗಳ ಬೇಡಿಕೆಯ ಅಂದಾಜು ಮತ್ತು ಕೃಷಿ ಉತ್ಪನ್ನಗಳ ಹಾಗೂ ಹೂಡುವಳಿಗಳ ಮಾರುಕಟ್ಟೆಗೆ ಸಂಬಂಧಿಸಿದ ನೀತಿಯನ್ನು ಒಳಗೊಂಡಿದೆ.

**೨.೩ ವ್ಯಾಪ್ತಿ :** ಕೃಷಿ ಮಾರುಕಟ್ಟೆಯು ವ್ಯಾಪಕವಾಗಿ ಎರಡು ರೀತಿಯ ಕಾರ್ಯಗಳನ್ನು ಒಳಗೊಂಡಿರುತ್ತದೆ. ಅವುಗಳೆಂದರೆ ೧) ವಿನಿಮಯ, ಮತ್ತು ೨) ಸುಗಮಗೊಳಿಸುವಿಕೆಯ ಕಾರ್ಯಗಳು.[೩]

**೧) ವಿನಿಮಯ :** ಈ ಕಾರ್ಯವು ಮಾರಾಟದ, ಅಂದರೆ ಬೇಡಿಕೆಯ ಸೃಷ್ಟಿಯ ಮತ್ತು ಖರೀದಿಯ ವಿಧಾನಗಳನ್ನು ಒಳಗೊಂಡಿರುತ್ತದೆ.

**೨) ಸುಗಮಗೊಳಿಸುವಿಕೆ :** ಈ ಕಾರ್ಯಗಳು ವಸ್ತುಗಳ ಸಂಗ್ರಹಣೆ, ಪಿಂಡಿ ಕಟ್ಟುವಿಕೆ, ಸಾಗಣೆ ವರ್ಗೀಕರಣ, ಹಣಕಾಸಿನ ಪೂರೈಕೆ, ಮಾರುಕಟ್ಟೆ ಸಂಶೋಧನೆ ಮೊದಲಾದ ಕಾರ್ಯಗಳನ್ನು ಒಳಗೊಂಡಿರುತ್ತದೆ.

ಹೀಗೆ ಉತ್ಪಾದಕರಿಂದ ಅನುಭೋಗಿಗಳಿಗೆ ಸರಕುಗಳು ಪ್ರವಹನದ ಪ್ರಕ್ರಿಯೆಯಲ್ಲಿ ಬರುವ ಈ ಎಲ್ಲ ಕಾರ್ಯಗಳು ಒಂದು ಅಥವಾ ಅನೇಕ ಬಾರಿ ನಿರ್ವಹಿಸಲ್ಪಡುತ್ತವೆ.

ವ್ಯಾಪಕ ಅರ್ಥದಲ್ಲಿ ಹೇಳುವದಾದರೆ, ರೈತರು ಉತ್ಪಾದಿಸಿದ ವ್ಯವಸಾಯೋತ್ಪನ್ನಗಳ ಮಾರಾಟ ಮತ್ತು ಕೃಷಿ ಸರಕುಗಳ ಉತ್ಪಾದನೆಗೆ ರೈತರಿಗೆ ಅಗತ್ಯವಾಗಿ ಬೇಕಾಗಿರುವ ಹೂಡುವಳಿಗಳ ಮಾರಾಟದ ಕಾರ್ಯಗಳು ಕೃಷಿ ಮಾರುಕಟ್ಟೆಯ ವ್ಯಾಪ್ತಿಯಲ್ಲಿ ಬರುತ್ತವೆ. ಈ ರೀತಿಯಾಗಿ ಕೃಷಿ ಮಾರುಕಟ್ಟೆಯು, ಕೃಷಿ ಉತ್ಪನ್ನಗಳ ಮಾರುಕಟ್ಟೆ ಮತ್ತು ಹೂಡುವಳಿಗಳ ಮಾರುಕಟ್ಟೆಯನ್ನು ಒಳಗೊಂಡಿರುತ್ತದೆ.

ಹೂಡುವಳಿಗಳ ಮಾರುಕಟ್ಟೆಯು ಇತ್ತೀಚಿನ ಹಾಗೂ ಸಾಪೇಕ್ಷವಾಗಿ ಹೊಸದಾದ ವಿಷಯವಾಗಿದೆ. ಹಿಂದಿನ ಕಾಲದಲ್ಲಿ ರೈತರು ಸ್ಥಳೀಯ ಬಿತ್ತನೆ ಬೀಜಗಳನ್ನು, ಕೊಟ್ಟಿಗೆ ಗೊಬ್ಬರ ಮೊದಲಾದ ಹೂಡುವಳಿಗಳನ್ನು ಉಪಯೋಗಿಸುತ್ತಿದ್ದರು. ಈ ಹೂಡುವಳಿಗಳ ರೈತರ ಬಳಿಯೇ ಲಭ್ಯವಿರುತ್ತಿರುವದರಿಂದ ಮಾರುಕಟ್ಟೆಗಳಲ್ಲಿ ಇವುಗಳ ಖರೀದಿಯು ಅಲ್ಪ ಪ್ರಮಾಣದಲ್ಲಿ ಇತ್ತು.

ಆದರೆ ಇತ್ತೀಚಿನ ದಿನಗಳಲ್ಲಿ ಕೃಷಿ ವಲಯದಲ್ಲಿ ಆದ ಅಗಾಧ ಬದಲಾವಣೆಗಳ ಕಾರಣದಿಂದ ಸುಧಾರಿಸಿದ ಬೀಜ, ರಾಸಾಯನಿಕ ಗೊಬ್ಬರಗಳು, ಕೀಟನಾಶಕಗಳು, ಕಳೆನಾಶಕಗಳು, ಯಂತ್ರೋಪಕರಣ, ಸಾಧನ ಸಾಮಗ್ರಿಗಳು, ಸಾಲ ಮೊದಲಾದ ಕೃಷಿ ಹೂಡುವಳಿಯ ಪ್ರಮುಖ್ಯತೆ ಗಣನೀಯವಾಗಿ ಹೆಚ್ಚಿದೆ. ಕೃಷಿಯ ಹೊಸ ತಂತ್ರಜ್ಞಾನವು ಹೂಡುವಳಿಗೆ ಸ್ಪಂದಿಸುವಂತಾಗಿದೆ.

ಹೀಗೆ ಕೃಷಿ ಮಾರುಕಟ್ಟೆಯ ವಿಷಯವು ಮಾರುಕಟ್ಟೆಯ ಕಾರ್ಯಗಳು, ಅದಕ್ಕೆ ಸಂಬಂಧಿಸಿದ ಸಂಸ್ಥೆಗಳು, ಮಾರ್ಗಗಳು, ಮಾರಾಟ ದಕ್ಷತೆ ಮತ್ತು ವೆಚ್ಚಗಳು, ಬೆಲೆಯ ಹರಿವು ಮತ್ತು ಮಾರುಕಟ್ಟೆಯ ಸಂಯೋಜನೆ, ಉತ್ಪಾದಕರ ಹೆಚ್ಚುವರಿ, ಸರ್ಕಾರದ ನೀತಿ, ಸಂಶೋಧನೆ ಮತ್ತು ತರಬೇತಿ ಮೊದಲಾದ ವಿಷಯಗಳಿಗೆ ವ್ಯಾಪಿಸಿದೆ.

**೨.೪ ಭಾರತದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ :**

ಭಾರತವು ಕೃಷಿ ಪ್ರಧಾನ ದೇಶವಾಗಿದ್ದು, ಶೇ. ೭೦ ರಷ್ಟು ಜನ ಕೃಷಿ ಹಾಗೂ ಅದರ ಆಧಾರಿತ ಚಟುವಟಿಕೆಗಳಿಂದಲೇ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಕೃಷಿ ಉತ್ಪನ್ನಗಳು ನಮ್ಮ ಮೂಲ ಅವಶ್ಯಕತೆಗಳನ್ನು ಪೂರೈಸುವದಷ್ಟೇ ಅಲ್ಲದೆ, ಹಲವಾರು ಉದ್ಯಮಗಳಿಗೆ ಕಚ್ಚಾ ಸರಕುಗಳನ್ನು ಪೂರೈಸಿ ಅವುಗಳ ನಿರಂತರ ಉತ್ಪಾದನಾ ಚಟುವಟಿಕೆಗಳಿಗೆ ಚಾಲನೆ ನೀಡುತ್ತವೆ. ಕೃಷಿಯು ಭಾರತದ ಅರ್ಥ ವ್ಯವಸ್ಥೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಕೃಷಿ ಉತ್ಪನ್ನದ ಮಾರಾಟವು ಅವುಗಳ ಉತ್ಪಾದನೆಯಿಂದಲೇ ಪ್ರಾರಂಭವಾಗುತ್ತದೆ.

ಕೃಷಿಯ ಅಭಿವೃದ್ಧಿಯನ್ನು ಅದರ ಉತ್ಪಾದನೆಯ ಗಾತ್ರದಿಂದ ಮಾತ್ರ ನಿರ್ಧರಿಸಲಾಗದು, ಯಾಕೆಂದರೆ ಉತ್ಪಾದನೆಯಲ್ಲಿ ಹೆಚ್ಚಳವಾದಾಗಲೂ, ಬೆಲೆಗಳು ಲಾಭದಾಯಕವಾಗಿರದಿದ್ದರೆ ರೈತರು ನಷ್ಟವನ್ನು ಅನುಭವಿಸಿ ಕೃಷಿ ಚಟುವಟಿಕೆಯಲ್ಲಿ ತೊಡಗುವ ಹುಮ್ಮಸವು ಇಲ್ಲದಂತಾಗುತ್ತದೆ. ಆದ್ದರಿಂದ, ರೈತನ ಫಸಲಿಗೆ ಯೋಗ್ಯ ಬೆಲೆ ಸಿಕ್ಕು, ಮಾಡಿದ ಖರ್ಚು ವೆಚ್ಚಗಳನ್ನೆಲ್ಲಾ ಭರಿಸಿ ನಿವ್ವಳ ಲಾಭ ಹೊಂದುವದು ಅವಶ್ಯವಾಗಿದೆ. ಇದಕ್ಕಾಗಿ ಮಾರಾಟ ವ್ಯವಸ್ಥೆಯು ದೋಷರಹಿತ ಹಾಗೂ ಪಾರದರ್ಶಕವಾಗಿದ್ದು, ರೈತನ ಶೋಷಣೆಯನ್ನು ತಪ್ಪಿಸಬಲ್ಲದಾಗಿರಬೇಕು. ಅಂದರೆ, ಕೃಷಿ ಉತ್ಪನ್ನಗಳ ಮಾರಾಟದ ವಿವಿಧ ಚಟುವಟಿಕೆಗಳು ಸೂಕ್ತವಾದ ಶಾಸನಗಳ ನಿಯಂತ್ರಣಕ್ಕೆ ಒಳಪಟ್ಟಿರಬೇಕು.

ಕೃಷಿ ಮಾರುಕಟ್ಟೆಯ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಹಲವು ಗಂಭೀರ ದೋಷಗಳಿವೆ. ತೂಕ ಮತ್ತು ಅಳತೆಯಲ್ಲಿ ಮೋಸ, ಅತೀ ಹೆಚ್ಚಿನ ಮಾರುಕಟ್ಟೆ ವೆಚ್ಚಗಳ ಅಸ್ತಿತ್ವ, ರೈತರ ಅಜ್ಞಾನ, ಸೂಕ್ತ ಸಾಗಾಣಿಕೆಯ ವ್ಯವಸ್ಥೆಯ ಕೊರತೆ, ಮಾರಲ್ಪಡುವ ಹುಟ್ಟುವಳಿಯ ಪ್ರಮಾಣ ಚಿಕ್ಕದಾಗಿರುವದು. ಸಾಲಗಾರರ ಒತ್ತಡಕ್ಕೆ ಒಳಗಾಗುವದು, ಇನ್ನೂ ಹಲವಾರು ಕಾರಣಗಳು ಉತ್ಪನ್ನಗಳನ್ನು ಹಳ್ಳಿಯಲ್ಲಿಯೇ ಅನಾನುಕೂಲಕರ ಸ್ಥಿತಿಯಲ್ಲಿ ಮಾರಾಟ ಮಾಡಲು ಪ್ರೇರೇಪಿಸುತ್ತವೆ. ಕೆಲವೊಮ್ಮೆ ಪೇಟೆಗೆ ಹುಟ್ಟುವಳಿಯನ್ನು ತಂದರೂ ಅಲ್ಲಿಯೂ ಮಾರಾಟ ಮಧ್ಯವರ್ತಿಗಳ

ಶೋಷಣೆ, ವ್ಯವಹಾರದಲ್ಲಿ ಮೋಸ ಈ ಪ್ರವೃತ್ತಿಗಳಿಂದ ರೈತರು ಭ್ರಮನಿರಸರಾಗಿ, ಮಾರಾಟ ವ್ಯವಸ್ಥೆಯ ಬಗ್ಗೆ ಜಿಗುಪ್ಸೆಗೆ ಒಳಗಾಗುತ್ತಾನೆ. ಈ ಹಲವಾರು ಕಷ್ಟಕಾರ್ಪಣ್ಯಗಳು ಕ್ರಮೇಣ ಸರಕಾರದ ಕಣ್ಣು ತೆರೆಸಿದವು.

ಉತ್ಪಾದಕ - ಮಾರಾಟಗಾರರ ಚೌಕಾಸಿ ಸಾಮರ್ಥ್ಯ ಹೆಚ್ಚಿಸುವ ಮತ್ತು ಕೃಷಿ ಉತ್ಪನ್ನಗಳ ಮಾರಾಟಕ್ಕೆ ಸ್ಪರ್ಧಾತ್ಮಕ ಸ್ಥಿತಿಗತಿಗಳನ್ನು ಸೃಷ್ಟಿಸುವಿಕೆ ಕ್ರಮಬದ್ಧ ಕೃಷಿ ಮಾರುಕಟ್ಟೆ ಪದ್ಧತಿಯ ವಿಕಾಸಕ್ಕೆ ಪೂರ್ವಾಪೇಕ್ಷಿತ ಸಂಗತಿಗಳಾಗಿವೆ. ಈ ಪೂರ್ವಾಪೇಕ್ಷಿತ ಸಂಗತಿಗಳನ್ನು ಈಡೇರಿಸುವ ದಿಸೆಯಲ್ಲಿ ಮಾರುಕಟ್ಟೆಯ ವ್ಯವಸ್ಥೆಯ ಮೇಲೆ ಸಾರ್ವಜನಿಕ ನಿಯಂತ್ರಣದ ಅವಶ್ಯಕತೆ ಇದೆ.[೪] ಆದ್ದರಿಂದ ೧೯೨೬ ರಲ್ಲಿ ಬ್ರಿಟೀಷ ಸರಕಾರವು 'ರಾಯಲ್ ಕೃಷಿ ಆಯೋಗ'ವನ್ನು ರೈತರ ಈ ಸಮಸ್ಯೆಗಳನ್ನು ಆಳವಾಗಿ ಅಭ್ಯಸಿಸಿ ಸೂಕ್ತ ಪರಿಹಾರದ ಶಿಫಾರಸ್ಸುಗಳನ್ನು ಮಾಡುವುದಕ್ಕಾಗಿ ನೇಮಿಸಿತು. ಇದಕ್ಕೂ ಪೂರ್ವದಲ್ಲಿ ೧೮೮೬ ರಲ್ಲಿ ಬ್ರಿಟೀಷ್ ಸರಕಾರವು ತಮ್ಮದೇಶದ ಮೆಂಚೆಸ್ಟರ್‌ದ ಬಟ್ಟೆ ಕಾರ್ಖಾನೆಗಳಿಗೆ ಬೇಕಾಗುವ ಉತ್ತಮ ಗುಣಮಟ್ಟದ ಹತ್ತಿಯನ್ನು ಯೋಗ್ಯಬೆಲೆಗೆ ಪಡೆಯುವದಕ್ಕಾಗಿ ಭಾರತದಲ್ಲಿ ಪ್ರಥಮವಾಗಿ 'ಕರಾಂಜಿಯಾ ಹತ್ತಿಯ ಮಾರುಕಟ್ಟೆ'ಯನ್ನು ಹೈದ್ರಾಬಾದ ರೆಸಿಡೆನ್ಸಿ ಆದೇಶದ ಅನ್ವಯ ಸ್ಥಾಪಿಸಲಾಯಿತು.[೫] ೧೮೯೭ ರಲ್ಲಿ ಬ್ರಿಟೀಷ್ ಸರಕಾರವು 'ಬರಾರ ಕಾಟನ್ ಆ್ಯಂಡ್ ಗ್ರೇನ್ ಮಾರ್ಕೆಟ್' ಕಾನೂನನ್ನು ಪಾಸು ಮಾಡಿತು. ಈ ಶಾಸನದ ಅನ್ವಯ ಈ ಜಿಲ್ಲೆಯಲ್ಲಿ ಯಾವುದೇ ಸ್ಥಳವನ್ನು ಕೃಷಿ ಉತ್ಪನ್ನಗಳನ್ನು ಕೊಳ್ಳುವ ಮತ್ತು ಮಾರುವದಕ್ಕಾಗಿ ಘೋಷಿಸುವ ಅಧಿಕಾರ ಹಾಗೂ ಮಾರುಕಟ್ಟೆಯ ಮೇಲ್ವಿಚಾರಣೆ ಮಾಡಲು ಸಮಿತಿ ನೇಮಿಸುವ ಅಧಿಕಾರ ಪಡೆಯಿತು.[೬] ಈ ಕಾನೂನು ದೇಶದ ಉಳಿದ ಭಾಗಗಳಿಗೆ ಮಾದರಿ ಕಾನೂನಾಯಿತು. ೧೯೨೭ ರ ಮುಂಬೈ ಪ್ರಾಂತ್ಯದ 'ಬಾಂಬೆ ಹತ್ತಿ ಮಾರುಕಟ್ಟೆಗಳ ಕಾಯಿದೆ' ಜಾರಿಯಲ್ಲಿ ಬಂದಿತು. ಇದು ಮಾರುಕಟ್ಟೆ ನಿಯಂತ್ರಣ ಹಾಗೂ ಮಾರುಕಟ್ಟೆ ನ್ಯಾಯ ಸಮ್ಮತ ವಹಿವಾಟುಗಳ ದೃಷ್ಟಿಕೋನ ಹೊಂದಿತ್ತು.

ಮುಂಬೈ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೯, ಹೈದರಾಬಾದ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೩ ಪಸ್ಲಿ, ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾಯಿದೆ ೧೯೩೩, ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೯ ಹಾಗೂ ಕೊಡಗು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೬ ಮೊದಲಾದ ಶಾಸನಗಳು ಕೃಷಿ ಉತ್ಪನ್ನಗಳ ಮಾರಾಟಕ್ಕೆ ಮತ್ತು ಮಾರಾಟದ ಕಾರ್ಯಚಟುವಟಿಕೆಗಳ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಜಾರಿಯಲ್ಲಿದ್ದವು.

೧೯೨೬ ರಲ್ಲಿ ನೇಮಿಸಿದ 'ರಾಯಲ್ ಕೃಷಿ ಆಯೋಗ'ವು ತನ್ನ ಶಿಫಾರಸ್ಸುಗಳನ್ನು ೧೯೨೮ ರಲ್ಲಿ ಸಲ್ಲಿಸಿತು. ತನ್ನ ವರದಿಯಲ್ಲಿ ಭಾರತದಲ್ಲಿಯ ಕೃಷಿ ಉತ್ಪನ್ನಗಳ ಮಾರಾಟದ ದೋಷಗಳ ಬಗ್ಗೆ ಹೇಳುವಾಗ 'ಹಗಲು ಕಳ್ಳತನ' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಕೃಷಿ ಉತ್ಪನ್ನದ ಮಾರಾಟದಲ್ಲಿ ಅಡಕವಾಗಿರುವ ಹಲವಾರು ಸಮಸ್ಯೆಗಳಿಗೆ ಸರಿಯಾದ ಪರಿಹಾರ ಲಭಿಸಬೇಕಾದರೆ -

೧) ಮೊದಲು ದೇಶದಲ್ಲಿ ಗ್ರಾಮಾಂತರ ಸಾರಿಗೆ ಸಂಪರ್ಕ, ಸಂಗ್ರಹ, ಸಂಸ್ಕರಣ, ಪತ್ತು ನೀಡುವ ವ್ಯವಸ್ಥೆಯಲ್ಲಿ ಸುಧಾರಣೆಯಾಗಬೇಕು.

೨) ಸಾರಿಗೆ ವೆಚ್ಚ ಕಡಿಮೆ ಮಾಡುವದು ಮತ್ತು ಮಾರಾಟದ ವೆಚ್ಚಗಳನ್ನು ನಿರ್ದಿಷ್ಟಗೊಳಿಸುವದು.

೩) ತೂಕ, ಅಳತೆ, ಮಾಪುಗಳಲ್ಲಿ ಏಕರೂಪತೆಯನ್ನು ತರುವುದು.

೪) ಸಹಕಾರಿ ಮಾರಾಟ ಸಂಘಗಳನ್ನು ಬಲಪಡಿಸುವದು.

ಈ ಕಾರಣಗಳಿಗಾಗಿ ಮಾರಾಟ ಶಾಸನಗಳನ್ನು ರಚಿಸಿಕೊಂಡು ದೇಶದಲ್ಲೆಲ್ಲ ನಿಯಂತ್ರಿತ ಪೇಟೆಗಳನ್ನು ಸ್ಥಾಪಿಸುವದು ಹಾಗೂ ಅವುಗಳ ಮೂಲಕ ಪೇಟೆಯ ವ್ಯವಹಾರಗಳನ್ನು ಕ್ರಮಬದ್ಧಗೊಳಿಸುವದು. ಮುಂತಾದ ಅಂಶಗಳನ್ನು ಶಿಫಾರಸ್ಸಿನಲ್ಲಿ ತಿಳಿಸಲಾಗಿದೆ. ಈ ಶಿಫಾರಸ್ಸುಗಳನ್ನು "ಪ್ರಾಂತೀಯ ಮತ್ತು ಕೇಂದ್ರ ಬ್ಯಾಂಕಿಂಗ್ ಪರಿಶೀಲನಾ ಸಮಿತಿ"ಯು ಸಹ ಅನುಮೋದಿಸಿತು.

ಈ ಶಿಫಾರಸ್ಸುಗಳಿಗನುಗುಣವಾಗಿ ಕೇಂದ್ರ ಸರಕಾರವು ೧೯೩೫ ರಲ್ಲಿ ಕೇಂದ್ರಿಯ ಮಾರಾಟ ಇಲಾಖೆಯನ್ನು ಸ್ಥಾಪಿಸಿತು. ಈ ಇಲಾಖೆಯು ೧೯೩೮ ರಲ್ಲಿ ಮಾರುಕಟ್ಟೆ ಸ್ಥಾಪನೆಗೆ ವಿಧಿ-ವಿಧಾನಗಳ ಕರಡನ್ನು ರೂಪಿಸಿ, ಎಲ್ಲಾ ರಾಜ್ಯ ಸರಕಾರಗಳಿಗೆ ರವಾನಿಸಿತು. ತದನಂತರ, ವಿವಿಧ ರಾಜ್ಯಗಳು ದೇಶದ ತುಂಬೆಲ್ಲಾ ನಿಯಂತ್ರಿತ ಮಾರುಕಟ್ಟೆಗಳ ಜಾಲವನ್ನು ಹಮ್ಮಿಕೊಂಡವು. ಈ ಸಂದರ್ಭದಲ್ಲಿ ಜಮ್ಮು ಮತ್ತು ಕಾಶ್ಮೀರ, ಕೇರಳ ಮತ್ತು ಆಸ್ಸಾಂ ಬಿಟ್ಟು ಎಲ್ಲಾ ರಾಜ್ಯಗಳು ಮಾರುಕಟ್ಟೆಯ ನಿಯಂತ್ರಣ ಕಾನೂನನ್ನು ಜಾರಿಯಲ್ಲಿ ತಂದಿವೆ.

**೨.೧ ಸ್ವಾತಂತ್ರ್ಯ ನಂತರ ಭಾರತದಲ್ಲಿ ಕೃಷಿ ಉತ್ಪನ್ನ ನಿಯಂತ್ರಿತ ಮಾರುಕಟ್ಟೆಗಳ ಪ್ರಗತಿ ಕೋಷ್ಟಕ :**[೭]

| ವರ್ಷ | ಕೃ.ಉ.ಮಾ.ಸಂ. | ವರ್ಷ | ಕೃ.ಉ.ಮಾ.ಸಂ. |
|---|---|---|---|
| ಮಾರ್ಚ್ ೧೯೫೧ | ೨೩೬ | ಮಾರ್ಚ್ ೧೯೮೦ | ೪೪೪೬ |
| ಮಾರ್ಚ್ ೧೯೫೬ | ೪೭೦ | ಮಾರ್ಚ್ ೧೯೮೧ | ೪೬೦೫ |
| ಮಾರ್ಚ್ ೧೯೬೧ | ೭೧೫ | ಮಾರ್ಚ್ ೧೯೮೨ | ೪೭೯೨ |
| ಮಾರ್ಚ್ ೧೯೬೬ | ೧೦೧೨ | ಮಾರ್ಚ್ ೧೯೮೪ | ೫೫೭೯ |
| ಅಕ್ಟೋಬರ್ ೧೯೭೩ | ೨೭೫೪ | ಮಾರ್ಚ್ ೧೯೮೬ | ೫೭೬೬ |
| ಮಾರ್ಚ್ ೧೯೭೬ | ೩೫೨೮ | ಮಾರ್ಚ್ ೧೯೮೮ | ೬೦೬೨ |
| ಸೆಪ್ಟೆಂಬರ್ ೧೯೭೭ | ೩೭೬೩ | ಮಾರ್ಚ್ ೧೯೯೦ | ೬೨೧೭ |
| ಮಾರ್ಚ್ ೧೯೭೯ | ೪೩೪೫ | | |

**೨.೫ ಕರ್ನಾಟಕದಲ್ಲಿ ನಿಯಂತ್ರಿತ ಮಾರುಕಟ್ಟೆಗಳ ಉಗಮ ಮತ್ತು ಬೆಳವಣಿಗೆ :**

ಕರ್ನಾಟಕದಲ್ಲಿ ಭಾಷಾ ತಳಹದಿ ಮೇಲೆ ರಾಜ್ಯ ಸ್ಥಾಪನೆಯಾಗುವ ಮೊದಲು ಮುಂಬೈ ಕರ್ನಾಟಕ ವಿಭಾಗದಲ್ಲಿ ಬಾಂಬೆ ಹತ್ತಿ ಮಾರುಕಟ್ಟೆಗಳ ಕಾಯಿದೆ ೧೯೨೭ ರ ಅನ್ವಯ, ಬೆಳಗಾಂವಿ ಜಿಲ್ಲೆಯ ಬೈಲಹೊಂಗಲದಲ್ಲಿ ಹತ್ತಿ ಮಾರಾಟ ನಿಯಂತ್ರಣಕ್ಕಾಗಿ ೧೯೩೬ ರಲ್ಲಿ ನಿಯಂತ್ರಿತ ಮಾರುಕಟ್ಟೆಯ ಸ್ಥಾಪನೆಯಾಯಿತು, ೧೯೩೪ ರಲ್ಲಿ ರಾಯಚೂರ ನಿಯಂತ್ರಿತ ಮಾರುಕಟ್ಟೆಯನ್ನು ಹೈದರಾಬಾದ್ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೩ ರ ಪ್ರಕಾರ ಸ್ಥಾಪನೆಯಾಯಿತು. ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾಯಿದೆ ೧೯೩೩ ಹಾಗೂ ಮೈಸೂರು ಪ್ರಾಂತ್ಯದಲ್ಲಿ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಕಾಯಿದೆ ೧೯೩೯ ಜಾರಿಯಲ್ಲಿದ್ದ ೧೯೪೭ ರವರೆಗೆ ಮಾರುಕಟ್ಟೆ ಸ್ಥಾಪನೆಗೆ ಪ್ರಯತ್ನಗಳು ಮುಂದುವರೆದಿದ್ದವು.

ಹೀಗೆ ೧೯೫೬ ರಲ್ಲಿ ಭಾಷಾವಾರು ರಾಜ್ಯಗಳ ಪುನರ್ ರಚನೆಯಾಗಿ ಮೈಸೂರು ರಾಜ್ಯ ಉದಯವಾದಾಗ ಕೃಷಿ ಮಾರಾಟಕ್ಕೆ ಸಂಬಂಧಿಸಿದ ಐದು ಶಾಸನಗಳು ರಾಜ್ಯದ ವಿವಿಧ ಭಾಗಗಳಲ್ಲಿ ಜಾರಿಯಲ್ಲಿದ್ದವು. ಅವುಗಳೆಂದರೆ ;

೧) ಮುಂಬೈ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೯

೨) ಹೈದರಾಬಾದ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೩ ಪಸ್ಲಿ

೩) ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾಯಿದೆ ೧೯೩೩

೪) ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೩೯ ಮತ್ತು

೫) ಕೊಡಗು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ ೧೯೫೬[೮]

ಈ ಐದು ಕಾಯಿದೆಗಳ ಉದ್ದೇಶ ಏಕರೀತಿಯಾಗಿದ್ದರು ಒಂದೇ ಆಡಳಿತ ವ್ಯವಸ್ಥೆಯಲ್ಲಿ ವಿವಿಧ ವಿಭಾಗಗಳಲ್ಲಿ ಬೇರೆ ಬೇರೆ ಶಾಸನಗಳನ್ನು ಯಶಸ್ವಿಯಾಗಿ ಜಾರಿಯಲ್ಲಿ ತರಲು ಅನೇಕ ತೊಡಕುಗಳಿದ್ದವು. ಒಂದು ದಶಕದಲ್ಲಿ ಈ ವ್ಯವಸ್ಥೆಯ ಅಡಿಯಲ್ಲಿ ಎದುರಿಸಿದ ಸಮಸ್ಯೆಗಳನ್ನು ಆಧರಿಸಿ ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ನಿಯಂತ್ರಣ ಕಾರ್ಯ ಏಕರೂಪವಾಗಿ ಅನ್ವಯವಾಗುವಂತೆ ಸಮಗ್ರ ಕೃಷಿ ಮಾರಾಟ (ನಿಯಂತ್ರಣ) ಶಾಸನವನ್ನು ೧೯೬೬ ರಲ್ಲಿ ರಚಿಸಿ ಈವರೆಗಿದ್ದ ಐದು ಶಾಸನಗಳನ್ನು ಅನೂರ್ಜಿತಗೊಳಿಸಲಾಯಿತು. ಕ್ರೋಢೀಕೃತ ೧೯೬೬ ರ ಕಾನೂನನ್ನು ಜಾರಿಯಲ್ಲಿ ತರಲು ಅನುಕೂಲವಾಗುವಂತೆ ೧೯೬೮ ರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ನಿಯಮಗಳನ್ನು ರಚಿಸಿ, ೧೯೬೮ ರ ಮೇ ಮೊದಲ ದಿನದಂದು ಜಾರಿಯಲ್ಲಿ ತರಲಾಯಿತು. ಸದರಿ ಕಾನೂನನ್ನು ಜಾರಿಗೊಳಿಸಿದ ನಂತರ ಇದನ್ನು ೧೯೬೯ ರ ೧೯ ನೇ, ೧೯೭೦ ರ ೩ ನೇ, ೧೯೭೫ ರ ೨೪ ನೇ, ೧೯೭೬ ರ ೩೫ ನೇ, ೧೯೮೭ ರ ೨೯ ನೇ ೧೯೮೮ ರ ೬ ನೇ ಹಾಗೂ ೧೯೯೧ ರ ೧೬ ನೇ ಕಲಂಗಳಿಗೆ ಶಾಸನಗಳ ಅನ್ವಯ ಒಟ್ಟು ೧೪ ಬಾರಿ ತಿದ್ದುಪಡಿ ಮಾಡಲಾಗಿದೆ.[೯]

ಕರ್ನಾಟಕದಲ್ಲಿ ೧೯೪೭ ರಲ್ಲಿ ನಿಯಂತ್ರಿತ ಮುಖ್ಯ ಮಾರುಕಟ್ಟೆಗಳ ಸಂಖ್ಯೆ ಕೇವಲ ೧೧ ಇದ್ದುದು, ಭಾರತದ ರಜತೋತ್ಸವದ ವರ್ಷವಾದ ೧೯೭೧ ರಲ್ಲಿ ೯೨ ಕ್ಕೆ ಏರಿತು. ೧೯೯೭ ರಲ್ಲಿ ನಿಯಂತ್ರಿತ ಮಾರುಕಟ್ಟೆಗಳ ಸಂಖ್ಯೆ ೧೩೫, ಉಪ ಮಾರುಕಟ್ಟೆಗಳ ಸಂಖ್ಯೆ ೩೩೨ ಇದೆ. ಈಗ ಕರ್ನಾಟಕದಲ್ಲಿ ೧೪೭ ಮುಖ್ಯ ಮಾರುಕಟ್ಟೆ, ೩೫೦ ಉಪಮಾರುಕಟ್ಟೆ ಹಾಗೂ ೭೫೦ ಗ್ರಾಮೀಣ ಮಾರುಕಟ್ಟೆಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳಲ್ಲಿ ಮಾರಾಟ ವಾಗುತ್ತಿರುವ ಕೃಷಿ ಉತ್ಪನ್ನಗಳ ಮೌಲ್ಯ ೫೦೦೦ ಕೋಟಿ ರೂಪಾಯಿಗಳಿಗೂ ಅಧಿಕವಾಗಿದೆ.

**೨.೬ ನಿಯಂತ್ರಿತ ಕೃಷಿ ಮಾರುಕಟ್ಟೆಗಳು :**

ನಿಯಂತ್ರಿತ ಮಾರುಕಟ್ಟೆ ಎಂದರೆ ಸರ್ಕಾರದ ನಿಯಂತ್ರಣ ಮತ್ತು ನಿಬಂಧನೆಗಳಿಗೆ ಅನುಗುಣವಾಗಿ ನಡೆಯುವ ಮಾರುಕಟ್ಟೆಯ ವ್ಯವಸ್ಥೆಯಾಗಿದೆ. ಇದು ಉತ್ಪಾದಕ - ಮಾರಾಟಗಾರರಿಗೆ ಉತ್ತಮ ಸೌಲಭ್ಯಗಳನ್ನು ಒದಗಿಸುವ, ಮಾರುಕಟ್ಟೆಯಲ್ಲಿನ ಅನಾರೋಗ್ಯಕರ, ಅಕ್ರಮ ಚಟುವಟಿಕೆಗಳನ್ನು ನಿರ್ಮೂಲನೆ ಮಾಡುವ ಮತ್ತು ಮಾರುಕಟ್ಟೆಯ ವೆಚ್ಚಗಳನ್ನು ತಗ್ಗಿಸುವ ಮುಖ್ಯ ಧ್ಯೇಯಗಳನ್ನು ಹೊಂದಿರುತ್ತದೆ. ಈ ಧ್ಯೇಯಗಳ ಸಾಧನೆಗಾಗಿ ಸರಕಾರವು ಸೂಕ್ತವಾದ ಶಾಸನವನ್ನು ಜಾರಿಗೊಳಿಸುವ ಮೂಲಕ ಮಾರುಕಟ್ಟೆಯ ವ್ಯವಸ್ಥೆಯನ್ನು ನಿಬಂಧನೆಗೆ ಒಳಪಡಿಸುತ್ತದೆ.

ನಿಯಂತ್ರಿತ ಮಾರುಕಟ್ಟೆಗಳನ್ನು ರಾಜ್ಯ ಸರ್ಕಾರಗಳು ಸ್ಥಾಪಿಸುತ್ತವೆ. ಇವುಗಳ ನಿರ್ವಹಣೆಗೆ ಅಗತ್ಯವಿರುವ ನಿಯಮ ಮತ್ತು ನಿಬಂಧನೆಗಳನ್ನು ಸರ್ಕಾರವೇ ರೂಪಿಸುತ್ತದೆ.

ನಿಯಂತ್ರಿತ ಮಾರುಕಟ್ಟೆಯ ಸ್ಥಾಪನೆಯು ಒಂದು ಪರ್ಯಾಯ ಮಾರುಕಟ್ಟೆಯ ವ್ಯವಸ್ಥೆಯಲ್ಲ. ಮಾರುಕಟ್ಟೆ ವ್ಯವಸ್ಥೆಯಲ್ಲಿ ಅಕ್ರಮಗಳನ್ನು ಕಡಿಮೆ ಮಾಡುವ ಮತ್ತು ವ್ಯಾಪಾರದಲ್ಲಿ ಮುಕ್ತ ಸ್ಪರ್ಧೆಗೆ ಅವಕಾಶ ಒದಗಿಸುವದು ಈ ಮಾರುಕಟ್ಟೆಯ ಉದ್ದೇಶ. ನಿಯಂತ್ರಿತ ಮಾರುಕಟ್ಟೆಯಲ್ಲಿ ರೈತರು ತಮ್ಮ ಉತ್ಪನ್ನಗಳನ್ನು ಸಾವಿರಾರು ಮಂದಿ ಕೊಳ್ಳುವವರ ಎದುರಿನಲ್ಲಿ ಹಾಗೂ ಮುಕ್ತ ಸ್ಪರ್ಧಾತ್ಮಕ ಹರಾಜಿನಲ್ಲಿ ಮಾರಾಟ ಮಾಡುತ್ತಾನೆ. ಇದರಿಂದಾಗಿ ರೈತರಿಗೆ ತಮ್ಮ ಉತ್ಪನ್ನಗಳಿಗೆ ಯೋಗ್ಯವಾದ ಮತ್ತು ನ್ಯಾಯಸಮ್ಮತವಾದ ಬೆಲೆ ಪಡೆಯಲು ಸಾಧ್ಯವಾಗುತ್ತದೆ.

ನಿಯಂತ್ರಿತ ಮಾರುಕಟ್ಟೆಯು ಸರ್ಕಾರದ ನಿಯಮಕ್ಕೆ ಬದ್ಧವಾಗಿ ಸ್ಥಾಪನೆಯಾಗುತ್ತದೆ. ಇಂತಹ ಮಾರುಕಟ್ಟೆಯು ಒಂದು ಮಾರುಕಟ್ಟೆಯ ಸಮಿತಿಯ ಆಡಳಿತಕ್ಕೆ ಒಳಪಟ್ಟಿರುತ್ತದೆ.

**೨.೭ ನಿಯಂತ್ರಿತ ಮಾರುಕಟ್ಟೆಗಳ ಉದ್ದೇಶಗಳು :**

ನಿಯಂತ್ರಿತ ಮಾರುಕಟ್ಟೆಗಳು ಕೆಳಗಿನ ಉದ್ದೇಶಗಳನ್ನು ಈಡೇರಿಸುವ ಹಾಗೂ ಕಾರ್ಯಾಚರಣೆಯ ಉದ್ದೇಶಗಳನ್ನು ಹೊಂದಿದೆ;

೧) ರೈತರಿಗೆ ಸ್ಪರ್ಧಾತ್ಮಕ ಬೆಲೆಗಳು ದೊರೆಯುವಂತೆ ಮಾಡುವದು.

೨) ಉತ್ಪಾದಕರ ಬೆಲೆ ಮತ್ತು ಅನುಭೋಗಿಗಳ ಬೆಲೆಯ ನಡುವಿನ ಅಂತರವನ್ನು ತಗ್ಗಿಸುವದು

೩.) ಘೋಷಿತ ಹುಟ್ಟುವಳಿಗಳ ಸರಿಯಾದ ತೂಕ, ಅಳತೆ ಮತ್ತು ಮಾಪನಕ್ಕೆ ಅವಕಾಶ ಒದಗಿಸುವದು.

೪) ವ್ಯಾಪಾರಿಗಳ ಮತ್ತು ರುಸುಮು ದಲ್ಲಾಳಿಗಳ ಶುಲ್ಕದ ಪ್ರಮಾಣವನ್ನು ತಗ್ಗಿಸುವುದು.

೫) ಉತ್ಪನ್ನಗಳ ಮಾರಾಟಕ್ಕಾಗಿ, ಬಹಿರಂಗ ಹರಾಜು, ಟೆಂಡರ್ ಪದ್ಧತಿ ಅಥವಾ ಬಹಿರಂಗ ಒಪ್ಪಂದದ ವ್ಯವಸ್ಥೆಯನ್ನು ಅಳವಡಿಸುವದು.

೬) ಮಾರಾಟದಲ್ಲಿ ನ್ಯಾಯಬದ್ಧ ವಿಧಾನಗಳನ್ನು ಆಚರಣೆಯಲ್ಲಿ ತರುವದು.

೭) ಉತ್ಪನ್ನಗಳ ಮಾರಾಟದ ನಂತರ ಶೀಘ್ರವಾಗಿ ಹಣವನ್ನು ಪಾವತಿ ಮಾಡುವದು.

೮) ಕೃಷಿ ಉತ್ಪನ್ನಗಳ ಬೆಲೆ ಹಾಗೂ ಮಾರುಕಟ್ಟೆಗಳ ಬಗ್ಗೆ ಮಾಹಿತಿ ಒದಗಿಸುವದು.

೯) ವ್ಯಾಜ್ಯಗಳ ತೀರ್ಮಾನ ತ್ವರಿತಗತಿಯಲ್ಲಿ ಆಗುವ ವ್ಯವಸ್ಥೆ.

೧೦) ಮೂಲ ಸೌಲಭ್ಯಗಳನ್ನು ಉತ್ತಮ ಪಡಿಸುವುದರ ಮೂಲಕ ಕೃಷಿ ಉತ್ಪನ್ನಗಳಿಗೆ ಕ್ರಮಬದ್ಧವಾದ ಮಾರುಕಟ್ಟೆಯ ವ್ಯವಸ್ಥೆ ಒದಗಿಸುವದು.

**೨.೮ ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಬಳಸುತ್ತಿರುವ ವಿವಿಧ ಶಬ್ದಗಳ ಅರ್ಥ :**

**೧) ಕಲಂ ೨(೧) ಕೃಷಿ ಉತ್ಪನ್ನ :** ೧೯೬೮ ರ ಕೃಷಿ ಉತ್ಪನ್ನ ಮಾರುಕಟ್ಟೆ ಶಾಸನದಲ್ಲಿ ನಮೂದಿಸಿರುವಂತೆ ಕೃಷಿ ಉತ್ಪನ್ನವು ಪ್ರಾಣಿಗಳು ಇಲ್ಲವೆ ಕೋಳಿಗಳು, ಸಂಸ್ಕರಿಸಿದ ಅಥವಾ ಸಂಸ್ಕರಿಸದ, ವ್ಯವಸಾಯ, ಪಶುಸಂಗೋಪನೆ, ಜೇನುಸಾಕಾಣಿಕೆ, ತೋಟಗಾರಿಕೆ, ಅರಣ್ಯ ಉತ್ಪನ್ನ - ಇವುಗಳಿಂದ ಬಂದಂತ ಯಾವುದೇ ಉತ್ಪನ್ನಗಳನ್ನು ಅದು ಒಳಗೊಳ್ಳುತ್ತದೆ. ಇದಲ್ಲದೆ ಈ ಶಾಸನದನ್ವಯ ಸರ್ಕಾರವು ಪ್ರಕಟಣೆಯ ಮೂಲಕ ಘೋಷಿಸಲ್ಪಡುವ ಇನ್ನಿತರ ಯಾವುದೇ ಉತ್ಪನ್ನವನ್ನು ಸಹ ಕೃಷಿ ಉತ್ಪನ್ನವೆಂದು ಪರಿಗಣಿಸಲಾಗುತ್ತದೆ.

೧೯೮೦ ರ ತಿದ್ದುಪಡೆಯಾದ ಶಾಸನದನ್ವಯ ಪರಿಶಿಷ್ಟದಲ್ಲಿ ನಮೂದಿಸಿರುವ ಯಾವುದೇ ಉತ್ಪನ್ನ ಅಥವಾ ಹುಟ್ಟುವಳಿಯನ್ನು ಕೃಷಿ ಉತ್ಪನ್ನವೆಂದು ಕರೆಯಲಾಗುತ್ತದೆ.

ಈ ತಿದ್ದುಪಡೆಯಾದ ಶಾಸನವು, ಯಾವುದೇ ಉತ್ಪನ್ನವು, ಕೃಷಿ ಉತ್ಪನ್ನವೆಂದು ಪರಿಗಣಿಸಲಾಗುವುದೇ ಅಥವಾ ಇಲ್ಲವೇ ಎಂಬ ತೀರ್ಮಾನಿಸಲು ಪರಿಶಿಷ್ಟವನ್ನು ನೋಡಿದರೆ ಸಾಕು. ಆ ಉತ್ಪನ್ನವು ಪರಿಶಿಷ್ಟದಲ್ಲಿ ಸೇರಿಸಿದ್ದರೆ ಅದು ಕೃಷಿ ಉತ್ಪನ್ನವೆಂದೂ ಸೇರಿಸದಿದ್ದರೆ ಅದು ಕೃಷಿ ಉತ್ಪನ್ನವಲ್ಲವೆಂದು ತೀರ್ಮಾನಿಸತಕ್ಕದ್ದು.

**೨) ಕಲಂ ೨(೨) ವ್ಯವಸಾಯಗಾರ (ರೈತ) :** ಸ್ವಂತವಾಗಿ ಜಮೀನು ಹೊಂದಿ ಅದನ್ನು ಸಾಗುವಳಿ ಮಾಡುತ್ತಿರುವ ಯಾವುದೇ ವ್ಯಕ್ತಿ ಅಥವಾ ಜಮೀನಿನಲ್ಲಿ ಮಾಲೀಕನ ಪರವಾಗಿ ಸಾಗುವಳಿ ಮಾಡುತ್ತಿರುವ ಗೇಣಿದಾರನನ್ನು ವ್ಯವಸಾಯಗಾರ ಅಥವಾ ರೈತನೆಂದು ಕರೆಯಲಾಗುತ್ತದೆ.

**೩) ಕಲಂ ೨(೪) ಬ್ರೋಕರ್ :** ದಲಾಲಿ, ಫೀ ಅಥವಾ ಯಾವುದೇ ಒಂದು ಪ್ರತಿಫಲವನ್ನು ಪಡೆದುಕೊಳ್ಳುವ ಕಾರಣದಿಂದ ತನ್ನ ಯಜಮಾನನ ಪರವಾಗಿ ಘೋಷಿತ ಕೃಷಿ ಉತ್ಪನ್ನಗಳನ್ನು ಕೊಳ್ಳುವ ಅಥವಾ ಮಾರಾಟ ಮಾಡುವ, ಒಂದು ಒಪ್ಪಂದವನ್ನು ಮಾತ್ರವೇ ಏರ್ಪಡಿಸುವವ. ಆದರೆ ಸದರಿ ಘೋಷಿತ ಕೃಷಿ ಉತ್ಪನ್ನವನ್ನು ತನ್ನ ವಶಕ್ಕೆ

ಪಡೆದುಕೊಳ್ಳುವದಾಗಲಿ, ವಹಿಸಿಕೊಳ್ಳುವದಾಗಲಿ, ಸಾಗಾಣಿಕೆ ಮಾಡುವದಾಗಲಿ, ಕೊಳ್ಳುವ ಹಣ ಕೊಡುವದಾಗಲಿ, ಅಥವಾ ಮಾರಾಟದ ಹಣವನ್ನು ವಸೂಲು ಮಾಡುವದಾಗಲಿ ಮಾಡದಿರುವ ವ್ಯಕ್ತಿಯನ್ನು ಬ್ರೋಕರ್ ಎಂದು ಕರೆಯಲಾಗುವದು.

**೪) ಕಲಂ ೨(೫) ಕೊಳ್ಳುವವ ಅಥವಾ ಖರೀದಿದಾರ :** ಘೋಷಿತ ಕೃಷಿ ಉತ್ಪನ್ನಗಳನ್ನು ಖರೀದಿಸುವ ಅಥವಾ ಖರೀದಿಯ ಸಲುವಾಗಿ ಒಪ್ಪಂದ ಮಾಡಿಕೊಳ್ಳುವ ವ್ಯಕ್ತಿಯೇ ಕೊಳ್ಳುವವ ಅಥವಾ ಖರೀದಿದಾರನಾಗುತ್ತಾನೆ.

**೫) ಕಲಂ ೨(೬-ಎ) ಜಾನುವಾರು :** ಎಮ್ಮೆ, ಎತ್ತು, ಆಕಳು, ಹೋರಿ, ಮೇಕೆ, ಕುರಿ ಮತ್ತು ಅವುಗಳ ಕರು ಅಥವಾ ಮರಿಗಳನ್ನು ಜಾನುವಾರು ಶಬ್ದವು ಒಳಗೊಂಡಿರುತ್ತದೆ.

**೬) ಕಲಂ ೨(೮) ದಲಾಲ :** ತಾನು ಪಡೆದುಕೊಳ್ಳುವ ದಲಾಲಿ ಹಣಕ್ಕೆ ಪ್ರತಿಫಲವಾಗಿ ಕೃಷಿ ಉತ್ಪನ್ನದ ಮಾಲೀಕನ ಅಥವಾ ಮಾರಾಟಗಾರನ ಅಥವಾ ಖರೀದಿದಾರನ ಪರವಾಗಿ ಆ ಉತ್ಪನ್ನದ ಮಾರಾಟ ಅಥವಾ ಖರೀದಿ ಮಾಡುವ ಬಗ್ಗೆ ಅಥವಾ ಈ ಬಗ್ಗೆ ಪ್ರಸ್ತಾಪಿಸುವ ವ್ಯಕ್ತಿಯೇ ದಲಾಲನೆಂದು ಕರೆಯಲಾಗುತ್ತದೆ.

**೭) ಕಲಂ ೨(೯) ಹುಟ್ಟುವಳಿ :** ಮಾರಾಟಕ್ಕಿಟ್ಟಿರುವ ಯಾವುದೇ ಕೃಷಿ ಉತ್ಪನ್ನವನ್ನು ಹುಟ್ಟುವಳಿ ಎಂದು ಕರೆಯಲಾಗುತ್ತದೆ.

**೮) ಕಲಂ ೨(೧೨-ಎ) ಕೃಷಿ ಮಾರಾಟ ನಿರ್ದೇಶಕರು :** ರಾಜ್ಯ ಸರ್ಕಾರವು ಪ್ರಕಟಣೆಯ ಮೂಲಕ ಪ್ರಸ್ತುತ ಶಾಸನ ಅಥವಾ ನಿಯಮಗಳ ಅನ್ವಯ ನಿರ್ವಹಿಸಬೇಕಾದ ಯಾವುದೇ ಅಧಿಕಾರ ಮತ್ತು ಕಾರ್ಯಗಳನ್ನು ನಿರ್ವಹಿಸಲು ನಿರ್ದಿಷ್ಟಪಡಿಸಬಹುದಾದ ಯಾವುದೇ ಅಧಿಕಾರಿ ಅಥವಾ ಅಧಿಕಾರಿಗಳನ್ನು ಈ ಶಬ್ದ ಒಳಗೊಂಡಿರುತ್ತದೆ. ರಾಜ್ಯ ಸರ್ಕಾರವು ಕೃಷಿ ಮಾರಾಟ ನಿರ್ದೇಶಕರೆಂದು ನೇಮಕ ಮಾಡಿರುವ ಅಧಿಕಾರಿಯಾಗಿರುತ್ತಾರೆ.

**೯) ಕಲಂ ೨(೧೩) ರಫ್ತುದಾರ :** ಮಾರುಕಟ್ಟೆಯ ಕ್ಷೇತ್ರದಿಂದ ಯಾವುದೇ ವಸ್ತುಗಳನ್ನು ಸ್ವಂತ ಬಳಕೆ ಹೊರತುಪಡಿಸಿ, ಮಾರಾಟ ಮಾಡುವ, ಸಂಸ್ಕರಿಸುವ, ತಯಾರಿಸುವ ಅಥವಾ ಇನ್ನಿತರ ಯಾವುದೇ ಉದ್ದೇಶಕ್ಕಾಗಿ ತಾನು ಸ್ವಂತವಾಗಿ ಅಥವಾ ಬೇರೊಬ್ಬ ವ್ಯಕ್ತಿಯ ಪ್ರತಿನಿಧಿಯಾಗಿ ರಫ್ತುಮಾಡುವ ಅಥವಾ ರಫ್ತುಮಾಡಲು ಕಾರಣನಾಗುವ ಯಾವುದೇ ವ್ಯಕ್ತಿ ರಫ್ತುದಾರ ಎಂದು ಕರೆಯಲಾಗುತ್ತದೆ. ಬೆಳೆಗಾರ ಅಥವಾ ಸಾರ್ವಜನಿಕ ವಾಹನ ಹೊಂದಿರುವ ವ್ಯಕ್ತಿಯು ಈ ರಫ್ತುದಾರ ಶಬ್ದದ ವ್ಯಾಖ್ಯಾನದಲ್ಲಿ ಬರುವದಿಲ್ಲ.

**೧೦) ಕಲಂ ೨(೧೪-ಎ) ಆಮದುದಾರ :** ಮಾರುಕಟ್ಟೆ ಕ್ಷೇತ್ರದೊಳಕ್ಕೆ ಯಾವುದೇ ವಸ್ತುಗಳನ್ನು ಸ್ವಂತ ಬಳಕೆಗೆ ಹೊರತುಪಡಿಸಿ, ಮಾರಾಟ ಮಾಡುವ ಸಂಸ್ಕರಿಸುವ, ತಯಾರಿಸುವ ಅಥವಾ ಇನ್ನಿತರ ಯಾವುದೇ ಉದ್ದೇಶಕ್ಕಾಗಿ ತಾನು ಸ್ವಂತವಾಗಿ ಅಥವಾ ಬೇರೊಬ್ಬರ ವ್ಯಕ್ತಿಯ ಪ್ರತಿನಿಧಿಯಾಗಿ ಆಮದು ಮಾಡಿಕೊಳ್ಳುವ ಅಥವಾ ಆಮದು ಮಾಡಿಕೊಳ್ಳಲು ಕಾರಣನಾಗುವ ಯಾವುದೇ ವ್ಯಕ್ತಿಯನ್ನು ಆಮದುದಾರ ಎಂದು ಕರೆಯಲಾಗುತ್ತದೆ.

೧೧) **ಮಾರಾಟ :** ೨೦೦೩ ರ ತಿದ್ದುಪಡೆಯಾದ ಕಾನೂನು ಪ್ರಕಾರ, ಮಾರಾಟ ಎಂದರೆ ಕೊಂಡುಕೊಳ್ಳುವ, ಮಾರಾಟ ಮಾಡುವ, ಆಮದು ಮಾಡುವ, ರಫ್ತುಮಾಡುವ, ವರ್ಗೀಕರಿಸುವ, ಸಂಸ್ಕರಿಸುವ, ದಾಸ್ತಾನು ಮಾಡುವ, ಸಾಗಾಣಿಕೆ ಮಾಡುವ, ಬ್ರಾಂಡ್ ಮಾಡುವ, ಪ್ಯಾಕ್ ಮಾಡುವ, ಮಾರಾಟ ವ್ಯವಹಾರ ಮತ್ತು ವಿತರಣಾ ಮಾರ್ಗಗಳು ಹಾಗೂ ಘೋಷಿತ ಕೃಷಿ ಉತ್ಪನ್ನದ ಸುಗ್ಗಿಯಿಂದ ಪ್ರಾರಂಭಿಸಿ ಅಂತಹ ಉತ್ಪನ್ನವು ಗ್ರಾಹಕರಿಗೆ ತಲುಪುವವರೆಗೆ ನಡೆಸುವ ಎಲ್ಲ ಚಟುವಟಿಕೆಗಳನ್ನು ಇದರಲ್ಲಿ ಒಳಗೊಳ್ಳುತ್ತವೆ.[೧೦]

೧೨) **ಕಲಂ ೨(೩೨) ಸಂಸ್ಕರಣೆ :** ೨೦೦೩ ರ ತಿದ್ದುಪಡೆ ಕಾನೂನ ಪ್ರಕಾರ ಸಂಸ್ಕರಣ ಮಾಡುವದು ಎಂದರೆ ಘೋಷಿತ ಕಚ್ಚಾ ಕೃಷಿ ಉತ್ಪನ್ನಗಳನ್ನು ಉಪಯೋಗಕ್ಕೆ ಅಥವಾ ಬಳಕೆಗೆ ಯೋಗ್ಯವನ್ನಾಗಿ ಮಾಡಲು ಪುಡಿ ಮಾಡುವ, ಶುದ್ಧಮಾಡುವ, ಮಾಗಿಸುವ, ಹೊಟ್ಟು ತೆಗೆಯುವ, ಅರೆಯುವ, ರುಬ್ಬುವ, ಅರೆ ಬೇಯಿಸುವ, ಪಾಲೀಶ್ ಮಾಡುವ, ಜಿನ್ ಮಾಡುವ, ಪ್ರೆಸ್ ಮಾಡುವ, ಒಣಗಿಸುವ, ಅಥವಾ ಯಾವುದೇ ಇತರ ಕೈಕೆಲಸದ, ಯಾಂತ್ರಿಕ, ರಸಾಯನಿಕ, ಅಥವಾ ಭೌತಿಕ ಉಪಚಾರ ಮಾಡುವಂತಹ ಒಂದು ಅಥವಾ ಹೆಚ್ಚಿನ ಪ್ರಕ್ರಿಯೆ ಒಳಗೊಂಡಿರುತ್ತದೆ.[೧೧]

೧೩) **ಕಲಂ ೨(೧೯) ಮಾರುಕಟ್ಟೆಯ ಕ್ಷೇತ್ರ :** ಪ್ರಸ್ತುತ ಶಾಸನದ ಕಲಂ (೪) ರ ಅನ್ವಯ ಮಾರುಕಟ್ಟೆಯ ಕ್ಷೇತ್ರವೆಂದು ಘೋಷಿಸಿರುವ ಯಾವುದೇ ಕ್ಷೇತ್ರವನ್ನು ಮಾರುಕಟ್ಟೆ ಕ್ಷೇತ್ರವೆಂದು ಕರೆಯಲಾಗುವದು.

೧೪) **ಕಲಂ ೨(೧೯-ಎ) ಮಾರುಕಟ್ಟೆಯ ರಿವಾಜುಗಳು :** ದಲಾಲರ ದಲಾಲಿ ಹಣ, ಬೋರಕರೇಜ್, ತೂಕದ ಶುಲ್ಕ, ಏರಿಸುವ, ಇಳಿಸುವ, ಸ್ವಚ್ಛಗೊಳಿಸುವ, ವಿಂಗಡಿಸುವ, ಎಣಿಸುವ, ಸಾಣಿಗೆ ಹಾಕುವ, ಶುಚಿಗೊಳಿಸುವ, ಇವೇ ಮುಂತಾದವುಗಳನ್ನು ಒಳಗೊಂಡಂತೆ ಕೃಷಿ ಉತ್ಪನ್ನಗಳ ನಿರ್ವಹಣೆಗೆ ಆಕರಿಸಲಾಗುವ ವಿವಿಧ ವೆಚ್ಚಗಳನ್ನು ಮಾರುಕಟ್ಟೆಯ ರಿವಾಜುಗಳೆಂದು ಕರೆಯಲಾಗುವದು.

೧೫) **ಕಲಂ ೨(೨೦) ಮಾರುಕಟ್ಟೆ ಸಮಿತಿ :** ಪ್ರಸ್ತುತ ಶಾಸನದನ್ವಯ ಮಾರುಕಟ್ಟೆ ಕ್ಷೇತ್ರಕ್ಕೆ ಅನ್ವಯವಾಗುವಂತೆ ರಚಿಸಿರುವ ಮಾರುಕಟ್ಟೆ ಸಮಿತಿಯೇ ಮಾರುಕಟ್ಟೆಸಮಿತಿ ಎಂದು ಕರೆಯಲಾಗುತ್ತದೆ.

೧೬) **ಕಲಂ ೨(೨೧) ಪೇಟೆ ಕಾರ್ಯಕರ್ತರು :** ಬ್ರೋಕರ್, ದಲಾಲ, ಆಮದುದಾರ, ರಫ್ತುದಾರ, ಅರಳೆ ಮಾಡುವವ, ಪ್ರೆಸ್ ಮಾಡುವವನು, ಸಂಸ್ಕರಣಕಾರ, ದಾಸ್ತಾನುಗಾರ, ವರ್ತಕ ಮತ್ತು ಪ್ರಸ್ತುತ ನಿಯಮ ಹಾಗೂ ಉಪನಿಯಮಗಳ ಅನ್ವಯ ಪೇಟೆಯ ಕಾರ್ಯಕರ್ತನೆಂದು ಘೋಷಿಸಲ್ಪಡುವ ಯಾವುದೇ ವ್ಯಕ್ತಿ ಪೇಟೆ ಕಾರ್ಯಕರ್ತ.

೧೭) **ಕಲಂ ೨(೨೨) ಮಾರುಕಟ್ಟೆ ಉಪಪ್ರಾಂಗಣ :** ಪ್ರಸ್ತುತ ಶಾಸನದ ಕಲಂ ೬ ರ ಎರಡನೆಯ ಉಪವಿಧಿಯನ್ವಯ ಮಾರುಕಟ್ಟೆ ಪ್ರಾಂಗಣ ಎಂದು ಘೋಷಿಸಿದ ಅಥವಾ

ಘೋಷಿಸಲಾಗಿದೆ ಎಂದು ಭಾವಿಸಿದ ನಿರ್ದಿಷ್ಟ ಪಡಿಸಿದ ಸ್ಥಳವನ್ನು ಮಾರುಕಟ್ಟೆಯ ಉಪಪ್ರಾಂಗಣ ಎಂದು ಕರೆಯಲಾಗುವದು.

**೧೮) ಕಲಂ ೨(೨೩) ಮಾರುಕಟ್ಟೆ ಪ್ರಾಂಗಣ :** ಪ್ರಸ್ತುತ ಶಾಸನದನ್ವಯ ಮಾರುಕಟ್ಟೆಯ ಪ್ರಾಂಗಣವೆಂದು ಘೋಷಿಸಿರುವ ಅಥವಾ ಘೋಷಿಸಲಾಗಿದೆ ಎಂದು ಭಾವಿಸಿರುವ ನಿರ್ದಿಷ್ಟಪಡಿಸಿದ ಸ್ಥಳ ಮಾರುಕಟ್ಟೆ ಪ್ರಾಂಗಣವೆಂದು ಕರೆಯಲಾಗುವದು.

**೧೯) ಕಲಂ ೨(೨೪) ಮಾರುಕಟ್ಟೆ ವರ್ಷ :** ಏಪ್ರಿಲ್ ಒಂದನೇ ತಾರೀಖಿನಿಂದ ಪ್ರಾರಂಭವಾಗುವ ವರ್ಷವನ್ನು ಮಾರುಕಟ್ಟೆ ವರ್ಷ ಎಂದು ಕರೆಯಲಾಗುವದು.

**೨೦) ಕಲಂ ೨(೨೮) ಘೋಷಿತ ಕೃಷಿ ಉತ್ಪನ್ನ :** ಪ್ರಸ್ತುತ ಶಾಸನದ ಕಲಂ ೪ ಮತ್ತು ೫ ರ ಅನ್ವಯ ರಾಜ್ಯ ಸರ್ಕಾರವು ಪ್ರಕಟಣೆ ಮೂಲಕ ಘೋಷಿಸಿ ಮಾರುಕಟ್ಟೆಯ ಕ್ಷೇತ್ರದಲ್ಲಿ ಅದರ ಮಾರಾಟ ನಿಯಂತ್ರಣವನ್ನು ಜಾರಿಗೊಳಿಸುವದಕ್ಕೆ ಸಂಬಂಧಿಸಿದಂತೆ ಯಾವುದೇ ಕೃಷಿ ಉತ್ಪನ್ನವನ್ನು ಘೋಷಿತ ಕೃಷಿ ಉತ್ಪನ್ನವೆಂದು ಕರೆಯಲಾಗುವದು.

**೨೧) ವ್ಯಕ್ತಿ :** ಕಲಂ ೨(೩೦) ರ ಪ್ರಕಾರ, ವ್ಯಕ್ತಿ ಎಂಬ ಪದದಲ್ಲಿ ಹಿಂದೂ ಅವಿಭಕ್ತ ಕುಟುಂಬ, ನೋಂದಿತವಾಗಿರುವ ಅಥವಾ ಆಗದೇ ಇರುವ ಕಂಪನಿ, ಸಂಘ, ಅಥವಾ ಸಂಸ್ಥೆ ಅಥವಾ ವ್ಯಕ್ತಿಗಳ ಸಮೂಹ.

**೨೨) ಉತ್ಪಾದಕ :** ಕಲಂ ೨(೩೪) ರ ಪ್ರಕಾರ, ತನ್ನ ಸ್ವಂತ ಪರಿಶ್ರಮದಿಂದ, ತನ್ನ ಕುಟುಂಬದ ಯಾವುದೇ ಸದಸ್ಯರ ಪರಿಶ್ರಮದಿಂದ ಅಥವಾ ತನ್ನ ಇಲ್ಲವೆ ತನ್ನ ಕುಟುಂಬದ ಯಾವುದೇ ಸದಸ್ಯರ ಮೇಲ್ವಿಚಾರಣೆಯಲ್ಲಿ ಕೂಲಿಯವರ ಮೂಲಕ ವಸ್ತುಗಳ ರೂಪದಲ್ಲಿ ವೇತನ ಪಡೆಯುವ ಸೇವಕರ ಮೂಲಕ ತನ್ನ ಸ್ವಂತಕ್ಕಾಗಿ ಘೋಷಿತ ಕೃಷಿ ಉತ್ಪನ್ನಗಳನ್ನು ಉತ್ಪಾದಿಸುವ ವ್ಯಕ್ತಿಯನ್ನು ಉತ್ಪಾದಕನೆಂದು ಕರೆಯಲಾಗುವದು.

ಈ ಶಬ್ದದ ವ್ಯಾಪ್ತಿಯಲ್ಲಿ ಉತ್ಪಾದಕರ ಸಹಕಾರಿ ಸಂಘವು ಸೇರಲ್ಪಡುತ್ತದೆ.

**೨೩) ಚಿಲ್ಲರೆ ಮಾರಾಟ :** ಕಲಂ ೨(೩೭) ರ ಪ್ರಕಾರ, ಮಾರುಕಟ್ಟೆ ಸಮಿತಿಯ ಉಪನಿಯಮ ಅಥವಾ ಸ್ಥಾಯಿ ಆದೇಶಗಳನ್ವಯ ನಿರ್ದಿಷ್ಟಪಡಿಸಿರುವ ಪ್ರಮಾಣದ ಮಿತಿಗೆ ಮೀರದಂತೆ ಘೋಷಿತ ಕೃಷಿ ಉತ್ಪನ್ನಗಳನ್ನು ಗ್ರಾಹಕರಿಗೆ ಅವರ ಸ್ವಂತ ಉಪಯೋಗಕ್ಕಾಗಿ ಮಾರಾಟ ಮಾಡುವಿಕೆಗೆ ಚಿಲ್ಲರೆ ಮಾರಾಟ ಎನ್ನುತ್ತಾರೆ.

**೨೪) ಚಿಲ್ಲರೆ ವರ್ತಕ :** ಕಲಂ ೨(೩೭-ಎ) ರ ಪ್ರಕಾರ, ಯಾವುದೇ ಒಂದು ಕೃಷಿ ಉತ್ಪನ್ನದ ಪ್ರಮಾಣವು ಆರು ಕ್ವಿಂಟಲ್‌ಗಳಿಗೆ ಮೀರದಂತೆ ಹಾಗೂ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಕೃಷಿ ಉತ್ಪನ್ನಗಳ ಒಟ್ಟು ಪ್ರಮಾಣವು ಹದಿನೈದು ಕ್ವಿಂಟಾಲ್‌ಗಳಿಗೆ ಮೀರದಂತೆ ಕೃಷಿ ಉತ್ಪನ್ನಗಳನ್ನು ಏಕಕಾಲದಲ್ಲಿ ದಾಸ್ತಾನುಮಾಡುವ ಯಾವುದೇ ವ್ಯಕ್ತಿಗೆ ಚಿಲ್ಲರೆ ವರ್ತಕನೆಂದು ಕರೆಯಲಾಗುತ್ತದೆ.

**೨೫) ಗ್ರಾಮೀಣ ಸಂತೆ :** ಕಲಂ ೨(೩೭-ಬಿ) ರ ಪ್ರಕಾರ, ಪ್ರಸ್ತುತ ಶಾಸನ, ನಿಯಮ, ಉಪನಿಯಮ, ಅಥವಾ ಮಾರುಕಟ್ಟೆ ಸಮಿತಿಯ ಸ್ಥಾಯಿ ಆದೇಶಗಳ ಅನ್ವಯ ಪೇಟೆಕಾರ್ಯಕರ್ತರು ಕಾರ್ಯನಿರ್ವಹಿಸುತ್ತಿಲ್ಲದ ಆದರೆ ಘೋಷಿತ ಕೃಷಿ ಉತ್ಪನ್ನಗಳ ಚಿಲ್ಲರೆ ಮಾರಾಟ ನಡೆಯುವ ಸ್ಥಳಗಳನ್ನು ಗ್ರಾಮೀಣ ಸಂತೆ ಎಂದು ಕರೆಯಲಾಗುವದು.

**೨೬) ಕಾರ್ಯದರ್ಶಿ :** ಕಲಂ ೨(೩೯) ರ ಪ್ರಕಾರ, ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿ ಮತ್ತು ಕಾರ್ಯದರ್ಶಿಯ ಅಧಿಕಾರ ಮತ್ತು ಕಾರ್ಯಗಳನ್ನು ನಿರ್ವಹಿಸಲು ಕೃಷಿ ಮಾರಾಟ ನಿರ್ದೇಶಕರಿಂದ ಅಧಿಕಾರ ಪಡೆಯುವ ಯಾವುದೇ ಅಧಿಕಾರಿ, ಮಾರುಕಟ್ಟೆ ಸಮಿತಿಯ ಅಪರ ಕಾರ್ಯದರ್ಶಿ ಹಾಗೂ ಸಹಾಯಕ ಕಾರ್ಯದರ್ಶಿಯನ್ನು ಕಾರ್ಯದರ್ಶಿ ಎಂದು ಈ ಶಾಸನದನ್ವಯ ಪರಿಗಣಿಸಲಾಗುವದು.

**೨೭) ಉಗ್ರಾಣ :** ಕಲಂ ೨(೫೦) ರ ಪ್ರಕಾರ, ದಾಸ್ತಾನುಗಾರರ ಪರವಾಗಿ ಕೃಷಿ ಉತ್ಪನ್ನಗಳನ್ನು ದಾಸ್ತಾನು ಮಾಡುವ ಉದ್ದೇಶಕ್ಕಾಗಿ ಉಪಯೋಗಿಸಲ್ಪಡುವ ಅಥವಾ ಉಪಯೋಗಿಸಲ್ಪಡಬಹುದಾದ ಯಾವುದೇ ಕಟ್ಟಡ ರಚನೆ ಅಥವಾ ಸಂರಕ್ಷಿಸಲ್ಪಟ್ಟ ಆವರಣವನ್ನು ಉಗ್ರಾಣವೆಂದು ಕರೆಯಲಾಗುವದು.

**೨.೯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ :**

ವ್ಯವಸಾಯೋತ್ಪನ್ನಗಳ ಮಾರಾಟ ವ್ಯವಹಾರಗಳನ್ನು ನಿಯಂತ್ರಣದ ಕಕ್ಷೆಯಲ್ಲಿ ತರುವದಕ್ಕಾಗಿ ಕ್ರಮ ಪ್ರಾಪ್ತವಾದ ಹಾಗೂ ಶೋಷಣೆ ರಹಿತವಾದ ಉತ್ತಮ ಮಾರಾಟದ ವ್ಯವಸ್ಥೆಯನ್ನು ಒದಗಿಸುವ ಉದ್ದೇಶದಿಂದ ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಲು ಅವಕಾಶ ಒದಗಿಸಿಕೊಡಲಾಗಿದೆ. ಅದೇ ರೀತಿಯಲ್ಲಿ ಪ್ರತಿಯೊಂದು ನಿಯಂತ್ರಿತ ಮಾರುಕಟ್ಟೆಗಳಿಗೂ ಒಂದೊಂದು ಮಾರುಕಟ್ಟೆಯ ಸಮಿತಿಯನ್ನು ರಚಿಸಲು ಸಹ ಶಾಸನದಲ್ಲಿ ಅವಕಾಶ ನೀಡಲಾಗಿದೆ. ಇಂತಹ ಮಾರುಕಟ್ಟೆ ಸಮಿತಿಗಳು ಪ್ರಜಾಪ್ರಭುತ್ವ ತತ್ವದ ತಳಹದಿ ಮೇಲೆ ರೂಪಿತವಾದ ಸ್ವತಂತ್ರವಾದ ಮತ್ತು ಶಾಸನಬದ್ಧ ಅಸ್ತಿತ್ವ ಹೊಂದಿದ ಸಂಸ್ಥೆಗಳಾಗಿವೆ. ಈ ಮಾರುಕಟ್ಟೆಯ ಸಮಿತಿಗಳಲ್ಲಿ ವ್ಯವಸಾಯೋತ್ಪನ್ನಗಳ ಮಾರಾಟ ಕಾರ್ಯಚಟುವಟಿಕೆಯಲ್ಲಿ ಭಾಗವಹಿಸಬೇಕಾಗುವ ಹಾಗೂ ಈ ಬಗ್ಗೆ ಆಸಕ್ತಿಯುಳ್ಳ ಪ್ರಮುಖವಾದ ಎಲ್ಲಾ ಸಮೂಹಗಳ ಜನರಿಗೆ ಪ್ರಾತಿನಿಧ್ಯವನ್ನು ಕಲ್ಪಿಸಿಕೊಡಲಾಗಿದೆ. ಮೊದಲ ಬಾರಿಗೆ ರಚಿತವಾಗುವ ಮಾರುಕಟ್ಟೆ ಸಮಿತಿಯ ಸದಸ್ಯರುಗಳನ್ನು ರಾಜ್ಯ ಸರ್ಕಾರವು ನಾಮಕರಣ ಮಾಡುವದು. ಎರಡನೇ ಹಾಗೂ ನಂತರದ ಸಮಿತಿಗಳ ಸದಸ್ಯರುಗಳನ್ನು ಚುನಾವಣೆಯ ಮೂಲಕ ಆಯ್ಕೆ ಮಾಡಲು ಅವಕಾಶವಿದೆ.

ಮಾರುಕಟ್ಟೆ ಸಮಿತಿಯ ಅರ್ಥ : ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ ೧೯೬೬ ರ ಪ್ರಕಾರ ಮಾರುಕಟ್ಟೆ ಸಮಿತಿ ಎಂದರೆ ಒಂದು ಮಾರುಕಟ್ಟೆ ಕ್ಷೇತ್ರಕ್ಕೆ ಈ ಶಾಸನದ ಅಡಿಯಲ್ಲಿ ರಚಿತವಾದ ಮಾರುಕಟ್ಟೆ ಸಮಿತಿ.

ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನದ ಪ್ರಕಾರ ೧೫ ರಿಂದ ೧೮ ಸದಸ್ಯರ ಸಮಿತಿಯು ರಚನೆಯಾಗುತ್ತದೆ. ಈ ಸಮಿತಿಯಲ್ಲಿ ರಾಜ್ಯಸರ್ಕಾರದಿಂದ ನಾಮಕರಣಗೊಂಡ ಸದಸ್ಯರ ಅಧಿಕಾರದ ಅವಧಿ ೨ ವರ್ಷಗಳು ಹಾಗೂ ಸರ್ಕಾರವು ಈ ಅವಧಿಯನ್ನು ಒಂದು ವರ್ಷ ಹೆಚ್ಚಿಸಬಹುದು. ಹಾಗೆಯೇ ಚುನಾಯಿತ ಸಮಿತಿಯ ಅಧಿಕಾರದ ಅವಧಿ ೫ ವರ್ಷಗಳ ಹಾಗೂ ಸರ್ಕಾರ ಅದರ ಅವಧಿಯನ್ನು ಒಂದು ವರ್ಷ ವಿಸ್ತರಿಸಬಹುದು. ಸರ್ಕಾರದಿಂದ ನಾಮಾಂಕಿತರ ನೇಮಕ ನವಂಬರ್ ೯೯ ರಿಂದ ರದ್ದಾಗಿದೆ.

ಕೃಷಿ ಉತ್ಪನ್ನ ಮಾರುಕಟ್ಟೆಯ ಸಮಿತಿಯ ರಚನೆಯು ಆ ಮಾರುಕಟ್ಟೆ ಕ್ಷೇತ್ರದಲ್ಲಿ ಬರುವ ವ್ಯವಸಾಯೋತ್ಪನ್ನಗಳ ಮಾರಾಟ ಕಾರ್ಯ ಚಟುವಟಿಕೆಯಲ್ಲಿ ಭಾಗವಹಿಸಬೇಕಾದ ಮತ್ತು ಈ ಬಗ್ಗೆ ಆಸಕ್ತಿಯುಳ್ಳ ಪ್ರಮುಖವಾದ ಸಮೂಹಗಳ ಪ್ರತಿನಿಧ್ಯವನ್ನು ಶಾಸನದಲ್ಲಿ ಉಲ್ಲೇಖಿಸಿದಂತೆ ಹೊಂದಿರುತ್ತದೆ. ಸಮಿತಿಯಲ್ಲಿ ರೈತರ ಪ್ರತಿನಿಧಿಗಳು ೧೧ ಜನರು (ಒಂದು ಸ್ಥಾನ ಮಹಿಳೆಯರಿಗೆ ಹಾಗೂ ಎರಡು ಸ್ಥಾನಗಳಲ್ಲಿ ತಲಾ ಒಂದೊಂದು ಸ್ಥಾನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಇರುತ್ತದೆ). ಖರೀದಿದಾರರ ಪ್ರತಿನಿಧಿ-೧; ಮಾರಾಟ ಸಹಕಾರಿ ಸಂಘಗಳ ಪ್ರತಿನಿಧಿ-೧; ಸಂಸ್ಕರಣ ಸಹಕಾರಿ ಸಂಘಗಳ ಪ್ರತಿನಿಧಿ-೧; ಕೃಷಿ ಮಾರಾಟ ನಿರ್ದೇಶಕರಿಂದ ನಾಮಕರಣಗೊಂಡ ಇಲಾಖಾ ಪ್ರತಿನಿಧಿ-೧. ಹೀಗೆ ಒಟ್ಟು ೧೫ ಜನರು ಸಮಿತಿಯ ಸದಸ್ಯರಾಗಿರುತ್ತಾರೆ.

ರೈತರ ಪ್ರತಿನಿಧಿಗಳ ಚುನಾವಣೆಗಾಗಿ ಪ್ರತಿ ಮಾರುಕಟ್ಟೆಯ ಕ್ಷೇತ್ರದಲ್ಲಿಯ ೧೧ ರೈತರ ಮತಕ್ಷೇತ್ರಗಳನ್ನು ಗುರುತಿಸಲಾಗುತ್ತದೆ. ಪ್ರತಿ ಮತಕ್ಷೇತ್ರದಿಂದ ಒಬ್ಬ ರೈತನು ಮಾರುಕಟ್ಟೆ ಸಮಿತಿಗೆ ಚುನಾಯಿತನಾಗುತ್ತಾನೆ.

ಈ ಸಮಿತಿಯ ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಸ್ಥಾನ ಕಡ್ಡಾಯವಾಗಿ ರೈತನಿಗೇ ಇರುತ್ತದೆ.

ಕೃಷಿ ಮಾರುಕಟ್ಟೆ ಸಮಿತಿಯು ಮಾರುಕಟ್ಟೆ ಕ್ಷೇತ್ರದಲ್ಲಿ ಕೃಷಿ ಸರಕುಗಳ ಮಾರಾಟದ ವ್ಯವಹಾರಗಳನ್ನು ನಿಯಂತ್ರಿಸುವ ಮತ್ತು ಮಾರಾಟದ ವಿಧಾನಗಳನ್ನು ಸುಧಾರಿಸುವ ಇದಕ್ಕಾಗಿ ಅನೇಕ ಸೌಲಭ್ಯಗಳನ್ನು ಒದಗಿಸುವ, ವ್ಯವಹಾರದ ನೀತಿ-ನಿಯಮಗಳನ್ನು ವಿಧಿಸುವ ಮತ್ತು ನೀತಿ-ನಿಯಮ ಉಲ್ಲಂಘಿಸಿದರೆ ದಂಡ ವಿಧಿಸುವ ಅಧಿಕಾರ ಹೊಂದಿರುತ್ತದೆ.

**೨.೧೦ ಕೃಷಿ ಮಾರುಕಟ್ಟೆ ಸಮಿತಿಯ ಅಧಿಕಾರ ಮತ್ತು ಕರ್ತವ್ಯಗಳು :**

ಕರ್ನಾಟಕದ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ ೧೯೬೬ ಹಾಗೂ ಶಾಸನದ ನಿಯಮಾವಳಿಗಳಿಗೆ ಅನುಗುಣವಾಗಿ ಸಮಿತಿಯ ಅಧಿಕಾರ ಮತ್ತು ಕರ್ತವ್ಯಗಳನ್ನು ನಮೂದಿಸಲಾಗಿದೆ. ಇವುಗಳನ್ನು ಸಾಮಾನ್ಯ ಕರ್ತವ್ಯಗಳು, ಅವಶ್ಯಕ ಕರ್ತವ್ಯಗಳು, ಐಚ್ಛಿಕ ಕರ್ತವ್ಯಗಳು, ಸಾಮಾಜಿಕ ಶೈಕ್ಷಣಿಕ ಹಾಗೂ ಆರ್ಥಿಕ ಕರ್ತವ್ಯಗಳೆಂದು ಹಾಗೂ ದಂಡ ವಿಧಿಸುವ ಅಧಿಕಾರಗಳು ಎಂದು ವಿಂಗಡಿಸಲಾಗಿದೆ.

**I) ಸಾಮಾನ್ಯ ಕರ್ತವ್ಯಗಳು :**

೧) ಮಾರುಕಟ್ಟೆ ಕ್ಷೇತ್ರದಲ್ಲಿ ಪ್ರಸ್ತುತ ಶಾಸನದ ನಿಯಮಗಳನ್ನು ಹಾಗೂ ಉಪನಿಯಮಗಳನ್ನು ಜಾರಿಗೊಳಿಸುವದು.

೨) ಕೃಷಿ ಉತ್ಪನ್ನಗಳ ಸಾಗಾಟ ಮತ್ತು ಮಾರಾಟಕ್ಕೆ ಸಂಬಂಧಿಸಿದಂತೆ ಸರ್ಕಾರ ನಿರ್ದೇಶಿಸಿರುವ ಸೌಲಭ್ಯಗಳನ್ನು ಒದಗಿಸುವುದು.

೩) ಮಾರುಕಟ್ಟೆ ಕ್ಷೇತ್ರದ ಯಾವುದೇ ಪ್ರದೇಶದಲ್ಲಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕೆ ಸಂಬಂಧಿಸಿದ ನಿರ್ದೇಶನ ಹಾಗೂ ಮೇಲ್ವಿಚಾರಣೆ ಕಾರ್ಯ ಹಾಗೂ ಇತರ ಕಾರ್ಯ.

**II) ಅವಶ್ಯಕ ಕರ್ತವ್ಯಗಳು :**

೧) ಮಾರುಕಟ್ಟೆ ಪ್ರಾಂಗಣಗಳನ್ನು ನಿರ್ವಹಿಸುವ ಮತ್ತು ಮೇಲ್ವಿಚಾರಣೆ ಮಾಡುವದು.

೨) ನಿಯಂತ್ರಿತ ಉತ್ಪನ್ನಗಳ ಸಾಗಾಣಿಕೆ ಹಾಗೂ ಅಗತ್ಯ ಸೌಲಭ್ಯಗಳನ್ನು ಸ್ವತಂತ್ರವಾಗಿ ಅಥವಾ ಇತರೆ ಪ್ರಾಧಿಕಾರದ ಸಹಾಯದೊಂದಿಗೆ ಕಲ್ಪಿಸುವದು.

೩) ಮಾರುಕಟ್ಟೆ ಕ್ಷೇತ್ರದಲ್ಲಿನ ಮಾರುಕಟ್ಟೆ ಹಾಗೂ ಉಪಮಾರುಕಟ್ಟೆ ಪ್ರಾಂಗಣದಲ್ಲಿ ಹಾಗೂ ಹೊರಗು ಉತ್ಪನ್ನಗಳ ಸಾಗಾಣಿಕೆ ಮತ್ತು ಮಾರಾಟಕ್ಕೆ ಬೇಕಾಗುವ ಮೂಲ ಸೌಲಭ್ಯ ಒದಗಿಸುವದು.

೪) ಪೇಟೆಯ ಕಾರ್ಯಕರ್ತರ ಅನುಮತಿಯನ್ನು ಮಂಜೂರ ಮಾಡುವ ನವೀಕರಿಸುವ, ಸ್ಥಗಿತಗೊಳಿಸುವ ಹಾಗೂ ರದ್ದು ಮಾಡುವದು.

೫) ಪೇಟೆಯ ಕಾರ್ಯಕರ್ತರ ನಡುವಳಿಕೆಯನ್ನು ಪರಿವೀಕ್ಷಿಸುವದು.

೬) ಮಾರುಕಟ್ಟೆ ಪ್ರಾಂಗಣದಲ್ಲಿ ಮಾರಾಟವನ್ನು ಪ್ರಾರಂಭಿಸುವ, ಪೂರ್ಣಗೊಳಿಸುವ ಮತ್ತು ಸ್ಥಗಿತಗೊಳಿಸುವ ಬಗ್ಗೆ ನಿಯಂತ್ರಣವನ್ನು ನಿರ್ವಹಿಸುವದು.

೭) ಅನುಮತಿ ನೀಡುವ ನಿಯಮಗಳನ್ನು ಜಾರಿಗೊಳಿಸುವದು.

೮) ವ್ಯವಸಾಯೋತ್ಪನ್ನಗಳ ಮಾರಾಟದ ಬಗ್ಗೆ ಆಗಬೇಕಾದ ಒಪ್ಪಂದಗಳನ್ನು ಮಾಡಿಕೊಳ್ಳುವ, ಕಾರ್ಯಗತಗೊಳಿಸುವ, ಜಾರಿಗೊಳಿಸುವ ಅಥವಾ ರದ್ದುಗೊಳಿಸುವ, ಉತ್ಪನ್ನಗಳನ್ನು ಖರೀದಿದಾರರಿಗೆ ವಹಿಸಿಕೊಡುವ, ಹಣ ಪಾವತಿ ಮತ್ತು ಉತ್ಪನ್ನಗಳ ಮಾರಾಟಕ್ಕೆ ಸಂಬಂಧಿಸಿದಂತೆ ಇತರ ಎಲ್ಲ ಕಾರ್ಯಗಳನ್ನು (ವ್ಯವಹಾರಗಳನ್ನು) ನಿಯಂತ್ರಿಸುವದು.

೯) ಮಾರುಕಟ್ಟೆಯ ಪ್ರಾಂಗಣದಲ್ಲಿ ಮಾರಾಟಗಾರ ಹಾಗೂ ಖರೀದಿದಾರರ ನಡುವಣ ಉದ್ಭವಿಸುವ ವಿವಾದಗಳನ್ನು ಬಗೆಹರಿಸುವದು.

೧೦) ನಿಯಂತ್ರಿತ ಕೃಷಿ ಉತ್ಪನ್ನಗಳ ಉತ್ಪಾದನೆ, ಮಾರಾಟ, ದಾಸ್ತಾನು, ಸಂಸ್ಕರಣೆ, ಬೆಲೆಗಳು ಮತ್ತು ಚಲನೆ ಕುರಿತು ಮಾಹಿತಿ ಸಂಗ್ರಹಿಸುವ, ಸಂಕಲಿಸಿ ದಾಖಲಿಸುವ ಹಾಗೂ ಪ್ರಸಾರ ಮಾಡುವದು.

೧೧) ಉತ್ಪನ್ನಗಳ ಕಲಬೆರಿಕೆಯಾಗುವುದನ್ನು ತಪ್ಪಿಸಲು ಎಲ್ಲಾ ಕ್ರಮಕೈಕೊಳ್ಳುವ ಹಾಗೂ ಉತ್ಪನ್ನಗಳ ವರ್ಗೀಕರಣ ಮತ್ತು ಪ್ರಮಾಣೀಕರಣಕ್ಕೆ ಪ್ರೋತ್ಸಾಹಿಸುವದು.

೧೨) ಮಿತಿಮೀರಿದ ವ್ಯವಹಾರಗಳನ್ನು ತಡೆಗಟ್ಟುವ ಮೂಲಕ ಕೃಷಿ ಉತ್ಪನ್ನಗಳ ವ್ಯವಹಾರಗಳಲ್ಲಿನ ಸ್ಥಳೀಯ ಹಾನಿ ಕಡಿಮೆ ಮಾಡುವ ಮಾರುಕಟ್ಟೆಯ ಸ್ಥಿರತೆಯನ್ನು ಕಾಯ್ದುಕೊಳ್ಳುವದು.

೧೩) ಸಮಿತಿಯು ಪಡೆದುಕೊಳ್ಳಲು ಹಕ್ಕು ಹೊಂದಿರುವ ಶುಲ್ಕ ರಿವಾಜು, ಬಾಡಿಗೆ ಮತ್ತು ಯಾವುದೇ ಹಣವನ್ನು ವಿಧಿಸಿ ವಸೂಲು ಮಾಡುವದು.

**III) ಐಚ್ಛಿಕ ಕರ್ತವ್ಯಗಳು :**

೧) ಮಾರುಕಟ್ಟೆ ಸಮಿತಿಯ ಸ್ವಾಧೀನದಲ್ಲಿರುವ ಪ್ರಾಂಗಣಕ್ಕೆ ಜನರು ಹಾಗೂ ವಾಹನಗಳ ಪ್ರವೇಶವನ್ನು ನಿಯಂತ್ರಿಸುವದು.

೨) ಶಾಸನದ ನಿಯಮಗಳ ಉಲ್ಲಂಘಣೆಯಾದಾಗ ಮೊಕದ್ದಮೆ ಹೂಡುವ ಮತ್ತು ಇಂತಹ ಅಪರಾಧಗಳನ್ನು ನ್ಯಾಯಾಲಯದ ಹೊರಗೂ ಬಗೆಹರಿಸಿಕೊಳ್ಳುವದು.

೩) ತನ್ನ ಕರ್ತವ್ಯವನ್ನು ದಕ್ಷತೆಯಿಂದ ನಿಭಾಯಿಸಲು ಯಾವುದೇ ಚರ ಅಥವಾ ಸ್ಥಿರ ಆಸ್ತಿಗಳನ್ನು ಸ್ವಾಧೀನ ಪಡಿಸಿಕೊಳ್ಳುವ, ಹೊಂದುವ ಹಾಗೂ ಮಾರಾಟ ಮಾಡುವದು.

೪) ದಲಾಲರ ಸಹಾಯವಿಲ್ಲದೆ ಕೃಷಿ ಉತ್ಪನ್ನ ನೇರವಾಗಿ ಮಾರಾಟ ಮಾಡಲಿಚ್ಚಿಸುವ ರೈತರಿಗೆ ನೇರ ಮಾರಾಟ ಸೌಲಭ್ಯ ಒದಗಿಸುವದು.

೫) ಸಂಸ್ಕರಣ ಮತ್ತು ಗಂಟುಕಟ್ಟುವ ಸೌಲಭ್ಯ ಒದಗಿಸುವದು.

**IV) ಸಾಮಾಜಿಕ ಕರ್ತವ್ಯ :** ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನವು ಸಾಮಾಜಿಕ ಆರ್ಥಿಕ ಶಾಸನವಾಗಿದೆ. ಆದುದರಿಂದ ಅದು, ಕೃಷಿ ಮಾರಾಟಗಾರರಿಗೆ ಪ್ರಾಂಗಣ ಒದಗಿಸುವ, ಮಾರಾಟದ ಸೌಲಭ್ಯ, ಇತರೇ ಸೇವಾ ಸೌಲಭ್ಯ, ಸಾಗಾಣಿಕೆ ಸೌಲಭ್ಯ, ಸಂಗ್ರಹಣಾ, ಹಣಕಾಸಿನ, ವಸತಿ, ಉಪಹಾರ, ಶೌಚಾಲಯ, ಭದ್ರತಾ, ಪತ್ರಿಕೆ, ಅಗತ್ಯ ವಸ್ತುಗಳ ಅಂಗಡಿ, ಸಂಸ್ಕರಣ ಘಟಕ ಮುಂತಾದ ಸಾಮಾಜಿಕ ಸೇವೆಗಳನ್ನು, ಸೌಲಭ್ಯಗಳನ್ನು ಒದಗಿಸಿ ಮಾರಾಟಗಾರರ ಶೋಷಣೆಯನ್ನು ತಡೆಗಟ್ಟುವ ಆದ್ಯ ಕರ್ತವ್ಯವನ್ನು ನಿಭಾಯಿಸಬೇಕು. ಸರ್ಕಾರದ ಪೂರ್ವಾನುಮತಿ ಪಡೆದು ಪ್ರಕೃತಿ ವಿಕೋಪಗಳು ಸಂಭವಿಸಿದಾಗ ದೇಣಿಗೆ ನೀಡುವ ಮುಂತಾದ ಕರ್ತವ್ಯಗಳನ್ನು ನಿಭಾಯಿಸಬೇಕು.

**V) ಶೈಕ್ಷಣಿಕ ಕರ್ತವ್ಯ :**

೧) ವ್ಯವಸ್ಥಿತ ಪೇಟೆಯ ಜ್ಞಾನದ ಕೊರತಡಿಯನ್ನು ಒದಗಿಸುವದು.

೨) ಕೃಷಿ ತಾಂತ್ರಿಕತೆ ಮತ್ತು ಸಂಶೋಧನೆ ಕಾರ್ಯಕೈಕೊಳ್ಳುವ ಕೃಷಿ ವಿಶ್ವವಿದ್ಯಾಲಯಕ್ಕೆ ಸರ್ಕಾರದ ಅನುಮತಿ ಪಡೆದು ದೇಣಿಗೆ ನೀಡುವದು.

೩) ಲಾವಣಿ, ಜಾನಪದ ಗೀತೆ, ಬೀದಿ ನಾಟಕ ಮುಂತಾದವುಗಳ ಮೂಲಕ ರೈತರಲ್ಲಿ ಜಾಗೃತಿ ಮೂಡಿಸುವದು.

೪) ಕೃಷಿ ಮಾರಾಟ ಮಂಡಳಿಯ ಸಹಯೋಗದಿಂದ ಪ್ರಚಾರ ಕಾರ್ಯ ಹಾಗೂ ಚಲನಚಿತ್ರ, ಬಿತ್ತಿ ಚಿತ್ರಗಳ ಪ್ರದರ್ಶನ ಏರ್ಪಡಿಸಿ ರೈತರಲ್ಲಿ ಕೃಷಿ ಮಾರಾಟದ ಬಗ್ಗೆ ಅರಿವು ಮೂಡಿಸುವದು.

**VI) ಆರ್ಥಿಕ ಕರ್ತವ್ಯಗಳು :**

೧) ಸರ್ಕಾರದ ಪೂರ್ವಾನುಮತಿ ಪಡೆದು ಸಾಲಪತ್ರಗಳನ್ನು ನೀಡಿ ಹಣ ಸಂಗ್ರಹಿಸಬಹುದು. ಅಥವಾ ಸರ್ಕಾರದಿಂದ ಧನ ಸಹಾಯ ಪಡೆಯುವದು.

೨) ಸಮಿತಿಯ ಪೂರ್ವಾನುಮತಿಯಿಂದ, ಸಮಿತಿ ಪರವಾಗಿ ಆಧಾರವಾಗಿಟ್ಟ ಘೋಷಿತ ಕೃಷಿ ಉತ್ಪನ್ನಗಳ ಮೇಲೆ ನಿರ್ದಿಷ್ಟಪಡಿಸಿದ ರೀತಿಯಿಂದ ರೈತ ಮಾರಾಟಗಾರರಿಗೆ ಅಲ್ಪಾವಧಿ ಸಾಲ ನೀಡುವದು.

೩) ಮಾರುಕಟ್ಟೆಯ ಕ್ಷೇತ್ರದಲ್ಲಿ ನಿಯಂತ್ರಿತ ಹುಟ್ಟುವಳಿಗಳಲ್ಲಿ ವ್ಯವಹಾರ ಮಾಡುವ ಮಾರಾಟ ಸಂಘ ಅಥವಾ ಸಂಸ್ಕರಣಾ ಸಹಕಾರಿ ಸಂಘ, ಇನ್ನಾವುದೇ ಸಹಕಾರಿ ಸಂಘಗಳಿಗೆ ದುಡಿಯುವ ಬಂಡವಾಳಕ್ಕಾಗಿ ನಿರ್ದಿಷ್ಟ ಪಡಿಸಿದ ಷರತ್ತುಗಳಿಗೊಳಪಟ್ಟು ಸಾಲವನ್ನು ಒದಗಿಸುವದು.

೪) ಕೃಷಿ ಮಾರಾಟ ನಿರ್ದೇಶಕರ ಪೂರ್ವಾನುಮತಿ ಪಡೆದು ಮಾರುಕಟ್ಟೆ ಕ್ಷೇತ್ರದಲ್ಲಿ ನಿಯಂತ್ರಿತ ಉತ್ಪನ್ನಗಳಲ್ಲಿ ವ್ಯವಹರಿಸುವ ಮಾರಾಟ ಸಹಕಾರಿ ಸಂಘ ಅಥವಾ ಸಂಸ್ಕರಣಾ ಸಹಕಾರಿ ಸಂಘಗಳ ಶೇರುಗಳನ್ನು ಖರೀದಿಸುವದು.

೫) ಕೃಷಿ ಮಾರಾಟ ನಿರ್ದೇಶಕರ ಪೂರ್ವಾನುಮತಿ ಪಡೆದು, ಮಾರುಕಟ್ಟೆಯ ನಿಧಿಯಲ್ಲಿಯ ಉಳಿತಾಯದ ಹಣವನ್ನು, ಮಾರುಕಟ್ಟೆಯ ಫಲಾನುಭವಿಗಳಿಗೆ ಅನುಕೂಲವಾಗುವಂತಹ ಮೂಲಭೂತ ಸೌಕರ್ಯಗಳನ್ನು ಒದಗಿಸುವದು.

೬) ಇತರೇ ಸಮಿತಿಗಳಿಗೆ ಅಥವಾ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಸಾಲಕೊಡುವದು.

**VII) ಇತರ ಕರ್ತವ್ಯಗಳು :**

೧) ಪೇಟೆಯ ಕಾರ್ಯಕರ್ತರ ಮುಷ್ಕರ ಸಂದರ್ಭಗಳಲ್ಲಿ ಕೃಷಿ ಮಾರಾಟ ನಿರ್ದೇಶಕರ ಪೂರ್ವಾನುಮತಿಯೊಂದಿಗೆ ಸಹಕಾರ ಮೂಲಕ ಮಾರಾಟದ ವ್ಯವಸ್ಥೆ ಕಲ್ಪಿಸುವದು.

೨) ಕೆಲವು ಮಹತ್ವದ ವಿಷಯಗಳಿಗೆ ಸಂಬಂಧಿಸಿದಂತೆ ಸಲಹೆ ಪಡೆಯಲು ಉಪ ಸಮಿತಿಗಳನ್ನು ನೇಮಿಸುವದು.

೩) ಕೃಷಿ ಉತ್ಪನ್ನಗಳು ಮಾರುಕಟ್ಟೆ ಬಂದಾಗ ಆವಕ ದಾಖಲೆಗಳನ್ನು ನಿರ್ವಹಿಸುವದು.

೪) ಫೀ ಅಥವಾ ಶುಲ್ಕ ವಸೂಲಾತಿಯ ದಾಖಲೆಗಳನ್ನು ನಿರ್ವಹಿಸುವದು.

೫) ಶುಲ್ಕ ವಸೂಲಾತಿ ಕಾರ್ಯ ನಿರ್ವಹಿಸುವ ಸಿಬ್ಬಂದಿಗೆ ಪಕ್ಕದ ಪ್ರತಿ ಹೊಂದಿದ ರಸೀದಿ ಪುಸ್ತಕ ಮತ್ತು ಹಣದ ಪೆಟ್ಟಿಗೆಯನ್ನು ಒದಗಿಸುವದು.

೬) ತೂಕದವರಿಗೆ, ಹಮಾಲರಿಗೆ, ಚಕ್ಕಡಿಯವರಿಗೆ ಹಾಗೂ ಸಿಪಾಯಿಗಳಿಗೆ ಬ್ಯಾಡ್ಜಗಳನ್ನು ಪೂರೈಸುವದು.

೭) ಅಭಿವೃದ್ಧಿಯ ಕಾರ್ಯಗಳ ಯೋಜನೆ ಮತ್ತು ರೂಪ ರೇಷೆಗಳನ್ನು ತಯಾರಿಸುವದು.

೮) ಕೃಷಿ ಮಾರಾಟ ನಿರ್ದೇಶಕರು ಅಥವಾ ಅವರಿಂದ ಅಧಿಕಾರ ಪಡೆದಿರುವ ಅಧಿಕಾರಿಗಳ ನಿರ್ದೇಶನದಂತೆ ಲೆಕ್ಕಪತ್ರ ಇಡುವದು ಮತ್ತು ಆಸ್ತಿ ಮತ್ತು ಜವಾಬ್ದಾರಿಗಳನ್ನು ಪ್ರಕಟಿಸುವದು.

೯) ಆದಾಯ ಮತ್ತು ವೆಚ್ಚಗಳ ಮೇಲೆ ನಿಯಂತ್ರಣವಿಡುವದು.

೧೦) ಮುಂದಿನ ವರ್ಷಕ್ಕಾಗಿ ಮುಂಗಡ ಪತ್ರ ತಯಾರಿಸುವದು ಮತ್ತು ನಿರ್ವಹಿಸುವದು.

೧೧) ಮಾರುಕಟ್ಟೆ ಸಮಿತಿಯು ಸರ್ಕಾರದೊಂದಿಗೆ ಪತ್ರ ವ್ಯವಹಾರಗಳನ್ನು ಕೃಷಿ ಮಾರಾಟ ನಿರ್ದೇಶಕರ ಮೂಲಕವೇ ನಿರ್ವಹಿಸುವದು.

**VIII) ಸಮಿತಿಯ ಅಧಿಕಾರಗಳು :**

೧) ಪ್ರಸ್ತುತ ಶಾಸನದನ್ವಯ ವಿಧಿಸಿರುವ ನಿಬಂಧನೆಗೊಳಪಟ್ಟು ಮಾರುಕಟ್ಟೆ ಸಮಿತಿಯ ಸ್ಥಾಪನೆಯ ಧ್ಯೇಯೋದ್ದೇಶಗಳನ್ನು ಈಡೇರಿಸಲು ಕೈಕೊಳ್ಳಬೇಕಾದ ಕಾರ್ಯ ನಿರ್ವಹಿಸಲು ಹಾಗೂ ಯಾವುದೇ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳಲು ಮತ್ತು ಈ ಸಂಬಂಧವಾಗಿ ಒಪ್ಪಂದ ಮಾಡಿಕೊಳ್ಳಲು ಅಥವಾ ತನ್ನ ವಶದಲ್ಲಿಟ್ಟುಕೊಳ್ಳಲು ಅಥವಾ ಗುತ್ತಿಗೆ ಆಧಾರ ಮೇಲೆ ಕೂಡಲು ಅಥವಾ ಆಸ್ತಿ ವರ್ಗಾವಣೆ ಮಾಡಲು ಸಮಿತಿಗೆ ಅಧಿಕಾರವಿದೆ.

೨) ರೂ. ೫,೦೦೦ ಕ್ಕಿಂತ ಹೆಚ್ಚಿದ್ದರೆ ಸರ್ಕಾರದಿಂದ ಅನುಮತಿ ಪಡೆದು, ರೂ. ೫,೦೦೦ ಕ್ಕಿಂತ ಕಡಿಮೆಯಿದ್ದರೆ ಕೃಷಿ ಮಾರಾಟ ನಿರ್ದೇಶಕರ ಪೂರ್ವಾನುಮತಿ ಪಡೆದು (ಮಾರುಕಟ್ಟೆ ಶುಲ್ಕ ಹೊರತುಪಡಿಸಿ) ವಸೂಲಾಗದ ಹಣವನ್ನು ವಜಾ ಮಾಡುವ ಅಧಿಕಾರ.

೩) ರೂ. ೧೦೦ ಗಳಿಗಿಂತ ಹೆಚ್ಚು ಆದರೆ ರೂ. ೫೦೦ ಗಿಂತ ಕಡಿಮೆ ಇರುವ ಬರಬೇಕಾದ ಶುಲ್ಕ ಅಥವಾ ಇತರೆ ಹಣವನ್ನು ಕೈಬಿಡುವ ಅಧಿಕಾರವನ್ನು ಸಮಿತಿಯು, ಕೃಷಿ ಮಾರಾಟ ನಿರ್ದೇಶಕರ ಪೂರ್ವಾನುಮತಿಯೊಂದಿಗೆ ಚಲಾಯಿಸಬಹುದು. ಶುಲ್ಕ ಅಥವಾ ಇತರ ಬರಬೇಕಾದ ಹಣದ ಮೊತ್ತ ೫೦೦ ರೂ. ಗಿಂತ ಅಧಿಕವಿದ್ದರೆ, ಸರ್ಕಾರದ ಪೂರ್ವಾನುಮತಿ ಪಡೆದು ಚಲಾಯಿಸಬಹುದು.

೪) ಶಾಸನದ ನಿಯಮಗಳ ಉಲ್ಲಂಘಣೆ ಮಾಡಿದ ಯಾವುದೇ ವ್ಯಕ್ತಿಗಳಿಗೆ ದಂಡ ವಿಧಿಸುವ ಅಧಿಕಾರ.

೫) ಸಮಿತಿಯ ಉಪನಿಯಮಗಳ ಪ್ರಕಾರ ಶೇ. ೧೨ ಕ್ಕೆ ಕಡಿಮೆ ಇಲ್ಲದಂತೆ ಆದರೆ ಶೇ. ೩೦ ಮೀರದಂತೆ ದಂಡ ವಿಧಿಸುವ ಅಧಿಕಾರವಿದೆ.

೬) ಪೇಟೆಯ ಕಾರ್ಯಕರ್ತರನ್ನು ಲೆಕ್ಕವನ್ನು ಹಾಜರಪಡಿಸುವಂತೆ ಕೇಳುವ ಅಧಿಕಾರ ಮತ್ತು ತಪ್ಪಿದಲ್ಲಿ ದಂಡವಿಧಿಸುವ ಅಧಿಕಾರ.

೭) ಸಮಿತಿಯ ಉಪನಿಯಮಗಳ ಉಲ್ಲಂಘಣೆಗಾಗಿ ರೂ. ೧೦೦ ದಂಡ ವಿಧಿಸುವ ಅಧಿಕಾರ ಹಾಗೂ ರೂ. ೨೫/- ದಂಡ ವಿಧಿಸುವ ಅಧಿಕಾರ ಸಮಿತಿ ಅಧ್ಯಕ್ಷರಿಗಿದೆ.

೮) ಮೇಲೆ ಸೂಚಿಸಿರುವ ಕರ್ತವ್ಯಗಳನ್ನು ನಿಭಾಯಿಸುವದಕ್ಕಾಗಿ ಅಧಿಕಾರ ಇದೆ.

೯) ಕೃಷಿ ಉತ್ಪನ್ನಗಳನ್ನು ಸಾಗಿಸುವ ವಾಹನಗಳನ್ನು ತಡೆಯುವ, ಪರಿಶೀಲಿಸುವ ಅಧಿಕಾರ.

ಹೀಗೆ ಸಮಿತಿಗೆ ಅಧಿಕಾರವನ್ನು ಕೊಟ್ಟು, ಕರ್ತವ್ಯಗಳನ್ನು ನಿಭಾಹಿಸುವ ಹೊಣೆಗಾರಿಕೆಯ ನಿರ್ಮಿಸುವದರ ಮೂಲಕ, ರೈತರ ಶೋಷಣೆಯನ್ನು ತಡೆಯಲು ಹಾಗೂ ಉತ್ತಮ ಮಾರಾಟದ ರೂಢಿಗಳನ್ನು ಅನುಷ್ಠಾನದಲ್ಲಿ ತರಲು ಸಾಧ್ಯ.

**೨.೧೧ ಉಪಸಂಹಾರ :**

ಈ ಆಧ್ಯಾಯದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ, ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಬೆಳವಣಿಗೆ, ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಯ ಲಕ್ಷಣಗಳು ಹಾಗೂ ಮೂಲ ಸೌಲಭ್ಯಗಳ ಬಗ್ಗೆ ವಿವರವಾದ ವಿಶ್ಲೇಷಣೆಯನ್ನು ಮಾಡಲಾಗಿದೆ.

**ಕೊನೆ ಟಿಪ್ಪಣಿ:**

೧. **ಕೃಷಿ ಮಾರುಕಟ್ಟೆ** ; ಎಚ್. ಆರ್.ಕೃಷ್ಣಯ್ಯಗೌಡ,(೨೦೦೦-೦೧),ಪು.೪

೨. ಅದೇ, ಪು.೪

೩. ಅದೇ, ಪು.೫

೪. ಅದೇ, ಪು.೧೫೭

೫. **ಅಗ್ರಿಕಲ್ಚರಲ್ ಮಾರ್ಕೆಟಿಂಗ್ ಇನ್ ಇಂಡಿಯಾ**; ಎಸ್.ಎಸ್. ಆಚಾರ್ಯ ಮತ್ತು ಎನ್.ಎಲ್. ಅಗರವಾಲ,(೧೯೯೨),ಪು.೨೨೯

೬. ಅದೇ, ಪು.೨೨೯

೭. ಅದೇ, ಪು.೨೩೦

೮. **ರಜತ ರಶ್ಮಿ**; ಸ್ಮರಣ ಸಂಚಿಕೆ, ಲೇ. ಆರ್.ಎಂ.ಮೂಗಿ,(೧೯೯೭),ಪು.೪

೯. **ಕರ್ನಾಟಕ ವ್ಯವಸಾಯೋತ್ಪನ್ನ ಮಾರಾಟ(ನಿಯಂತ್ರಣ)ಶಾಸನ**; ಎಸ್.ಎಸ್.ಶಂಕರಮೂರ್ತಿ,(೧೯೯೪),ಪು.೧

೧೦. **ಕೃಷಿ ಪೇಟೆ**; ಕರ್ನಾಟಕ ವ್ಯವಸಾಯೋತ್ಪನ್ನ ಮಾರಾಟ(ನಿಯಂತ್ರಣ)ಶಾಸನದ ತಿದ್ದುಪಡಿ;ಸಂ.,ಎಸ್.ಸೆಲ್ವಕುಮಾರ,(ಆ.,೨೦೦೭),ಪು.೧೩

೧೧. ಅದೇ., ಪು.೧೪

# ಅಧ್ಯಾಯ ಮೂರು
# ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ

೩.೧ ಪ್ರವೇಶ

೩.೨ ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ

೩.೩ ಮುಖ್ಯ ಮಾರುಕಟ್ಟೆಯಾಗಿ ಕಾರ್ಯನಿರ್ವಹಣೆ

೩.೪ ಉಪ-ಮಾರುಕಟ್ಟೆಗಳು

೩.೫ ಮಹಾಲಿಂಗಪುರದ ಸಂತೆ ಮತ್ತು ನಿತ್ಯದ ಮಾರ್ಕೆಟ್

೩.೬ ಜಾನವಾರು ಮಾರುಕಟ್ಟೆ

೩.೭ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಲಕ್ಷಣಗಳು

೩.೮ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿನ ಸೌಲಭ್ಯಗಳು

೩.೯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದಲ್ಲಿಯ ಕಛೇರಿಯ ಮಾನವ ಸಂಪನ್ಮೂಲ

೩.೧೦ ಅಭಿವೃದ್ಧಿಯ ಕಾರ್ಯಗಳು

೩.೧೧ ಉಪಸಂಹಾರ

## ಅಧ್ಯಾಯ ಮೂರು :
# ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ

**೩.೧ ಪ್ರವೇಶ :** ೧೯೯೭ ರ ಅಗಸ್ಟ ೧೫ ರಂದು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ದಿ|| ಜೆ. ಎಚ್. ಪಟೇಲರ ಸರ್ಕಾರದ ನಿರ್ಧಾರದಿಂದ ಪಂಚನದಿಗಳ ನಾಡಾಗಿದ್ದ ಬಿಜಾಪುರ ಜಿಲ್ಲೆಯು ವಿಭಜನೆಗೊಂಡು, ಬಿಜಾಪುರ ಮತ್ತು ಬಾಗಲಕೋಟ ಎಂದು ಹೆಸರುಗೊಂಡವು. ಬಾಗಲಕೋಟ ಜಿಲ್ಲೆಯು ಬಹುತೇಕ ನೀರಾವರಿ ಸೌಲಭ್ಯಗಳಿಂದ ಕೂಡಿಕೊಂಡ ಜಿಲ್ಲೆಯಾಗಿದೆ. ಈ ಜಿಲ್ಲೆಯು ಕೈಗಾರಿಕೆ ಮತ್ತು ವ್ಯಾಪಾರ ಎರಡು ಕ್ಷೇತ್ರದಲ್ಲಿ ಬಿಜಾಪುರ ಜಿಲ್ಲೆಗಿಂತ ಹೆಚ್ಚು ಹೆಸರುವಾಸಿಯಾಗಿದೆ. ಆಧುನಿಕ ಜಿಲ್ಲೆಯ ಐತಿಹಾಸಿಕ ಪುಟಗಳಲ್ಲಿ ಚಿಕ್ಕ ಗ್ರಾಮವಾಗಿದ್ದ ಅಂದಿನ ನರಗಟ್ಟಿಯು ಇಂದು ಕರ್ನಾಟಕದಾದ್ಯಂತ ಬೆಲ್ಲದ ಪೇಟೆಯ ಮಹಾಲಿಂಗಪುರವೆಂದು ಹೆಸರುವಾಸಿಯಾಗಿದೆ.[೧] ಮಹಾಲಿಂಗಪುರವು ಬಾಗಲಕೋಟ ಜಿಲ್ಲೆಯ, ಮುಧೋಳ ತಾಲೂಕಿನಲ್ಲಿ ಪ್ರಮುಖ ವಾಣಿಜ್ಯ ನಗರ. ಇದು ಶ್ರೀ ಬಸವೇಶ್ವರ ಕೃಷಿ ಉತ್ಪನ್ನ ಮಾರುಕಟ್ಟೆಗೆ ಪ್ರಸಿದ್ಧಿಯಾಗಿದೆ. ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಮತ್ತು ವಿಕಾಸವನ್ನು ಹಾಗೂ ಮಾರುಕಟ್ಟೆಯ ಪ್ರಗತಿ ಬಗ್ಗೆ ಅಭ್ಯಸಿಸುವದು ಈ ಅಧ್ಯಾಯದ ಉದ್ದೇಶವಾಗಿದೆ.

ಬಾಗಲಕೋಟ ಜಿಲ್ಲೆಯು ರಚಿತಗೊಂಡ ಸಂದರ್ಭದಲ್ಲಿ ಇದರ ಕ್ಷೇತ್ರದಲ್ಲಿ ಬದಾಮಿ, ಬಾಗಲಕೋಟ, ಬೀಳಗಿ, ಹುನಗುಂದ, ಜಮಖಂಡಿ ಮತ್ತು ಮುಧೋಳ ತಾಲ್ಲೂಕುಗಳು ಬರುತ್ತವೆ. ಈ ಜಿಲ್ಲೆಯ ಬದಾಮಿಯಲ್ಲಿ ೧ ಮುಖ್ಯ ಮಾರುಕಟ್ಟೆ, ಅದಕ್ಕೆ ೫ ಉಪಮಾರುಕಟ್ಟೆಗಳಿವೆ. ಒಟ್ಟು ಆರು ನಿಯಂತ್ರಿತ ಮಾರುಕಟ್ಟೆಗಳಿವೆ. ಬಾಗಲಕೋಟ ತಾಲ್ಲೂಕದಲ್ಲಿ ೧ ಮುಖ್ಯ ಮಾರುಕಟ್ಟೆ ಮತ್ತು ೩ ಉಪಮಾರುಕಟ್ಟೆಗಳಿವೆ. ಬೀಳಗಿಯಲ್ಲಿ ಯಾವುದೇ ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಗಳಿಲ್ಲ. ಹುನಗುಂದದಲ್ಲಿ ೧ ಮುಖ್ಯ ಹಾಗೂ ೩ ಉಪಮಾರುಕಟ್ಟೆಗಳಿವೆ. ಜಮಖಂಡಿಯಲ್ಲಿ ೧ ಮುಖ್ಯ ಹಾಗೂ ೨ ಉಪ ಮಾರುಕಟ್ಟೆಗಳಿವೆ. ಮುಧೋಳ ತಾಲ್ಲೂಕದ ಮಹಾಲಿಂಗಪುರದಲ್ಲಿ ೧ ಮುಖ್ಯ ಮಾರುಕಟ್ಟೆ ಹಾಗೂ ಮುಧೋಳ ಮತ್ತು ಲೋಕಾಪುರಗಳಲ್ಲಿ ಒಟ್ಟು ೨ ಉಪಮಾರುಕಟ್ಟೆಗಳು ಕಾರ್ಯನಿರ್ವಹಿಸುತ್ತಿವೆ.

೨೦೦೬-೦೭ ರಲ್ಲಿ ಬಾಗಲಕೋಟ ಜಿಲ್ಲೆಯಲ್ಲಿಯ ೨೦ ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ನಡೆದ ವ್ಯವಹಾರದ ಮೌಲ್ಯವು ಒಟ್ಟು ೧೨೩.೨೬ ಕೋಟಿ ರೂಪಾಯಿದಾಗಿದೆ. ಇದರಲ್ಲಿ ಬಾಗಲಕೋಟದ ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದಲ್ಲಿ ನಡೆದ ವ್ಯವಹಾರದ ಮೌಲ್ಯವು ೬೧.೪೩ ಕೋಟಿ ರೂಪಾಯಿಯಷ್ಟಿದ್ದು, ಒಟ್ಟು ವ್ಯವಹಾರದ ಮೌಲ್ಯದ ಪ್ರತಿಶತಃ ೪೯.೮೪ ರಷ್ಟಿದೆ. ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ವ್ಯವಹಾರದ ಮೌಲ್ಯವು ೩೯.೬೧ ರಷ್ಟಿದ್ದು, ಒಟ್ಟು ವ್ಯವಹಾರ ಮೌಲ್ಯದ ಶೇಕಡಾ ೩೨.೧೪ ರಷ್ಟು ಪಾಲನ್ನು ಹೊಂದಿ ಜಿಲ್ಲೆಯಲ್ಲಿಯೇ ದ್ವಿತೀಯ ಸ್ಥಾನದಲ್ಲಿದೆ. ಈ ಜಿಲ್ಲೆಯ ವಿವಿಧ ಕೃಷಿ ಉತ್ಪನ್ನ ಮಾರುಕಟ್ಟೆಗಳ ಬಗ್ಗೆ ಕೋಷ್ಟಕ ೩.೧ ರಲ್ಲಿ ತೋರಿಸಲಾಗಿದೆ :

| ಅ.ಸಂ. | ತಾಲ್ಲೂಕ | ನಿಯಂತ್ರಿತ ಮಾರುಕಟ್ಟೆಗಳು | | | |
|---|---|---|---|---|---|
| | | ಮುಖ್ಯ | ಉಪ | ಒಟ್ಟು | ವ್ಯವಹಾರದ ಮೌಲ್ಯ (ಕೋ. ರೂ.) |
| ೧ | ಬದಾಮಿ (೨೭-೦೭-೭೭) | ೦೧ | ೦೫ | ೦೬ | ೬.೫೩ |
| ೨ | ಬಾಗಲಕೋಟ (೧೦-೧-೪೫) | ೦೧ | ೦೩ | ೦೪ | ೬೧.೪೩ |
| ೩ | ಬೀಳಗಿ | -- | -- | -- | -- |
| ೪ | ಹುನಗುಂದ (೨೬-೭-೭೭) | ೦೧ | ೦೩ | ೦೪ | ೪.೬೦ |
| ೫ | ಜಮಖಂಡಿ (೧೯೫೨) | ೦೧ | ೦೨ | ೦೩ | ೧೧.೦೯ |
| ೬ | ಮುಧೋಳ (೯-೯-೮೭) | ೦೧ | ೦೨ | ೦೩ | ೩೯.೬೧ |
| | ಒಟ್ಟು | ೦೫ | ೧೫ | ೨೦ | ೧೨೩.೨೬ಮಾಹಿತಿ |

ಮೂಲ : ಬಾಗಲಕೋಟ ಜಿಲ್ಲೆಯ ಅಂಕಿ ಅಂಶಗಳ ನೋಟ -೨೦೦೬-೦೭(ಆವರಣದಲ್ಲಿ ದಿನಾಂಕವು ಮುಖ್ಯಮಾರುಕಟ್ಟೆಯ ಸ್ಥಾಪನೆಯ ದಿನಾಂಕವಾಗಿದೆ.)

### ೩.೨ ಮಹಾಲಿಂಗಪುರದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆಯ ಉಗಮ ಹಾಗೂ ವಿಕಾಸ :

ಮಹಾಲಿಂಗಪುರವು ಬಾಗಲಕೋಟ ಜಿಲ್ಲೆಯ ಮುಧೋಳ ತಾಲ್ಲೂಕಿನ ಪ್ರಮುಖ ವಾಣಿಜ್ಯ ನಗರ. ಈ ಪ್ರದೇಶದಲ್ಲಿ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಕಾನೂನು ೧೯೬೬ ಜಾರಿಯಲ್ಲಿ ಬರುವ ಪೂರ್ವದಲ್ಲಿ, ಮುಂಬೈ ಕೃಷಿ ಹುಟ್ಟುವಳಿ ಪೇಟೆಗಳ ೧೯೩೯ ರ ಕಾನೂನಡಿಯಲ್ಲಿ ಕಾರ್ಯೋನ್ಮುಖವಾಗಿತ್ತು. ೧೯೬೨ ರಿಂದಲೂ ರೈತರಿಂದ ರೈತರಿಗಾಗಿ ರಚಿತವಾದ ಕೃಷಿ ಪೇಟೆ ಮಹಾಲಿಂಗಪುರದಲ್ಲಿತ್ತು. ಈ ಮಾರುಕಟ್ಟೆಯು ಜಮಖಂಡಿ ಮುಖ್ಯ ಮಾರುಕಟ್ಟೆಯ ಉಪ-ಮಾರುಕಟ್ಟೆಯಾಗಿ ಕಾರ್ಯನಿರತವಾಗಿತ್ತು. ಪ್ರಾರಂಭಿಕ ಹಂತದಲ್ಲಿ ಮಾರುಕಟ್ಟೆಯ ಆಡಳಿತದಾರರು ನಿಪ್ಪಾಣಿ ಕೃಷಿ ಉತ್ಪನ್ನ ಮಾರುಕಟ್ಟೆಯಿಂದ ಬೆಲ್ಲ ಮತ್ತು ಶೇಂಗಾ ಖರೀದಿ ಮಾಡುತ್ತಿದ್ದರು. ಹಾಗೆ ಖರೀದಿಸಿದ ಉತ್ಪನ್ನಗಳನ್ನು ಮಹಾಲಿಂಗಪುರದ ಮಾರುಕಟ್ಟೆಯಲ್ಲಿನ ತಮ್ಮ ಅಡತಿಗಳಲ್ಲಿ ಹಾಗೂ ಇತರ ಊರುಗಳ ಖರೀದಿದಾರರಿಗೆ ಮಾರಾಟ ಮಾಡುತ್ತಿದ್ದರು. ಪ್ರಾಥಮಿಕ ಹಂತದಲ್ಲಿ ಕೆಲವು ಅಂಗಡಿಗಳು ಮಾತ್ರ ಇದ್ದವು.

ಮಹಾಲಿಂಗಪುರವು ಎಡಬದಿಯ ೧೦ ಕಿ.ಮೀ. ದೂರದಲ್ಲಿ ಕೃಷ್ಣಾ ನದಿ ಹಾಗೂ ಬಲಬದಿಯ ೮ ಕಿ.ಮೀ. ದೂರದಲ್ಲಿ ಘಟಪ್ರಭಾ ನದಿಗಳು ಹರಿದಿವೆ. ಇದಲ್ಲದೆ ೧೯೬೦ ರ ದಶಕದಲ್ಲಿ ಪ್ರಾರಂಭವಾದ ಹಿಡಕಲ್ ಜಲಾಶಯವು ಇದೆ. ಘಟಪ್ರಭೆಯ ಎಡದಂಡೆಯ ಕಾಲುವೆ ಮೂಲಕ ೮ ತಿಂಗಳು ನೀರು ಬಿಡುವದರಿಂದ ಈ ಭಾಗದ ರೈತರು ತಮ್ಮ ಕೃಷಿ

ಚಟುವಟಿಕೆಗಳನ್ನು ವರ್ಷದುದ್ದಕ್ಕೂ ಕೈಕೊಳ್ಳಲು ಅನುಕೂಲವಾಗುವಂತಾಗಿದೆ. ಈ ಮೂರು ನೀರಿನ ಮೂಲಗಳ ಜೊತೆಗೆ, ಭೂಮಿಯಲ್ಲಿ ಹೆಚ್ಚಾದ ಅಂತರ ಜಲದ ಪ್ರಯೋಜನೆಯನ್ನು ರೈತಾಪಿ ವರ್ಗದವರು ಕೊಳುವೆ ಬಾವಿ ಹಾಗೂ ಭಾವಿ ನಿರ್ಮಿಸುವದರ ಮೂಲಕವು ನೀರಾವರಿ ಸೌಲಭ್ಯ ಹೊಂದಲು ಸಾಧ್ಯವಾಗಿದೆ. ಇದರಿಂದಾಗಿ ಬಹು ವಾರ್ಷಿಕ ಬೆಳೆಯಾದ ಕಬ್ಬನ್ನು ಬೆಳೆಯಲು ಅನುಕೂಲವಾಯಿತು. ಮಹಾಲಿಂಗಪುರದ ಪಶ್ಚಿಮಕ್ಕೆ ೮ ಕಿ.ಮೀ. ದೂರದಲ್ಲಿ ಸೋಮಯ್ಯಾ ಸಕ್ಕರೆ ಕಾರ್ಖಾನೆಯ ಸ್ಥಾಪನೆಯು ರೈತರಲ್ಲಿ ಹೆಚ್ಚು ಪ್ರಮಾಣದಲ್ಲಿ ಕಬ್ಬು ಬೆಳೆಯುವಂತೆ ಪ್ರೇರೇಪಣೆ ನೀಡಿತು. ಸಕ್ಕರೆ ಕಾರ್ಖಾನೆಯಿಂದ ನುರಿಸಲಾಗದ ಹೆಚ್ಚು ಕಬ್ಬನ್ನು ಬೆಳೆದ ರೈತರು, ಕಾರ್ಖಾನೆಯಿಂದ ದೂರ ಪ್ರದೇಶದಲ್ಲಿ ರೈತರು ಕಬ್ಬನ್ನು ಬೆಲ್ಲ ಉತ್ಪಾದನೆ ಮಾಡುವದಕ್ಕೆ ಉಪಯೋಗಿಸಲು ಪ್ರಾರಂಭಿಸಿದ್ದರಿಂದ ಬೆಲ್ಲದ ಉತ್ಪಾದನೆ ಅಧಿಕವಾಗಿ, ಮಾರಾಟ ಮಾಡಲು ಮಹಾಲಿಂಗಪುರ ಮಾರುಕಟ್ಟೆಗೆ ಬರುತ್ತಿತ್ತು.

ಜಮಖಂಡಿ ಮುಖ್ಯ ಕೃಷಿ ಉತ್ಪನ್ನ ಮಾರುಕಟ್ಟೆಯಡಿಯಲ್ಲಿ ಉಪ ಮಾರುಕಟ್ಟೆಯಾಗಿ ಕಾರ್ಯನಿರ್ವಹಿಸುವಾಗ, ಮಹಾಲಿಂಗಪುರದಲ್ಲಿ ಹತ್ತು - ಹನ್ನೆರಡು ಅಡತಿ ಅಂಗಡಿಗಳು ಮಾರ್ಕೆಟ್ ಪ್ರದೇಶ ಹಾಗೂ ನಡಚೌಕಿಯ ಸುತ್ತಮುತ್ತಲಿನಲ್ಲಿ ಕಾರ್ಯೋನ್ಮುಖವಾಗಿದ್ದವು. ಅವುಗಳೆಂದರೆ :

೧) ಮಹಾಲಿಂಗ ಜಿರಲೆ ಅಡತಿ ಅಂಗಡಿ ಸಾ॥ ಜಮಖಂಡಿ
೨) ಶಿವಪ್ಪ ಜಿರಲೆ ಅಡತಿ ಅಂಗಡಿ ಸಾ॥ ಜಮಖಂಡಿ
೩) ಬಸಪ್ಪದು. ಪಟ್ಟಣಶೆಟ್ಟಿ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೪) ಗಜಾನನ ಟ್ರೇಡಿಂಗ್ ಕಂ. (ಮಾಳವದೆ) ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೫) ಮಹಾಲಿಂಗಪ್ಪ ಬ. ಪಶ್ಚಾಪುರ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೬) ಮಹಾಲಿಂಗಪ್ಪ ಢಪಳಾಪುರ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೭) ರಾಯಪ್ಪಣ್ಣ ಕೆ. ಚಿಂಚಲಿ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೮) ಚನ್ನಗಿರೇಶ್ವರ ಟ್ರೇಡಿಂಗ್ ಕಂ. (ಪಿ.ಜಿ. ಅಂಗಡಿ) ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೯) ಕುಮಾರೇಶ್ವರ ಟ್ರೇಡಿಂಗ್ ಕಂ. (ಸಿ. ಆರ್. ಕುಳ್ಳೊಳ್ಳಿ) ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೧೦) ಪಂಡಿತಪ್ಪ ಯ. ನುಚ್ಚಿ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೧೧) ಶ್ರೀಪತಿ ಧಡೂತಿ ಅಡತಿ ಅಂಗಡಿ ಸಾ॥ ಮಹಾಲಿಂಗಪುರ
೧೨) ಪ್ರಕಾಶ ಟ್ರೇಡಿಂಗ್ ಕಂ. ಅಡತಿ ಅಂಗಡಿ ಸಾ॥ ಮಹಾಲಿಂಗಪುರ

ಹೀಗೆ ಪ್ರಾರಂಭಿಕ ಹಂತದಲ್ಲಿ ಮೊದಲಿನ ೨ ಅಡತಿ ಅಂಗಡಿಗಳಿಂದ ಪ್ರಾರಂಭವಾದ ಬೆಲ್ಲದ ಮಾರುಕಟ್ಟೆಯ ಕಾಲಾನಂತರ ೧೨ ಅಡತಿ ಅಂಗಡಿಗಳು ವ್ಯಾಪಾರದಲ್ಲಿ ತೊಡಗಿದ್ದವು. ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರಾಟದ ನಿಯಂತ್ರಣಕ್ಕಾಗಿ ಸೆಸ್ ಮತ್ತು ಅನುಮತಿ ಶುಲ್ಕ ವಸೂಲಿಗಾಗಿ ಶ್ರೀ ಚನ್ನಗಿರೇಶ್ವರ ರಸ್ತೆಯಲ್ಲಿರುವ ಡಾ॥ ಗುಂಡಾ ಅವರ ಕಟ್ಟಡದಲ್ಲಿ ಕೃಷಿ

ಉತ್ಪನ್ನ ಮಾರುಕಟ್ಟೆಯ ಕಚೇರಿ ಇತ್ತು. ತಲಾ ರೂ. ೧೦೦/- ರಂತೆ ಖರೀದಿದಾರ ಮತ್ತು ದಲಾಲರಿಗೆ ಅನುಮತಿ ಶುಲ್ಕ ವಸೂಲಿ ಮಾಡಲಾಗುತ್ತಿತ್ತು.

ಆರಂಭದಲ್ಲಿ ನಿಪ್ಪಾಣಿ ಮಾರುಕಟ್ಟೆಯಿಂದ ಖರೀದಿಸಿ ತಂದು ಮಾರಾಟ ಮಾಡುತ್ತಿದ್ದ ಅಡತಿ ಅಂಗಡಿಗಳು, ೧೯೭೦ ರ ದಶಕದಲ್ಲಿ ಸ್ಥಳೀಯವಾಗಿ ಉತ್ಪಾದಿಸಿದ ಬೆಲ್ಲ ಮತ್ತು ಹತ್ತಿ ಮಾರಾಟ ಮಾಡುವ ಪ್ರಮುಖ ಕೇಂದ್ರವಾಗಿ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯು ಸದೃಢವಾಯಿತು. ಮಹಾಲಿಂಗಪುರದ ಹೃದಯ ಭಾಗದಲ್ಲಿರುವ ಈ ಮಾರುಕಟ್ಟೆಗೆ ಬೆಲ್ಲವನ್ನು ಸ್ವತಃ ಅಥವಾ ಮಧ್ಯವರ್ತಿಗಳ ಮೂಲಕ ಖರೀದಿಸುವದಕ್ಕಾಗಿ ಅಥಣಿ, ಬಾಗಲಕೋಟ, ಕಲಾದಗಿ, ಗುಳೇದಗುಡ್ಡ ಮುಂತಾದ ಸುತ್ತ ಮುತ್ತಲಿನ ಪಟ್ಟಣಗಳ ಅಡತಿದಾರರು ಮತ್ತು ವರ್ತಕರು ಬರುತ್ತಿದ್ದರು. ಹತ್ತಿಯನ್ನು ಖರೀದಿಸುವದಕ್ಕಾಗಿ ಗೋಕಾಕದ ವರ್ತಕರು ಬರುತ್ತಿದ್ದರು.

ಈ ಬೆಲ್ಲದ ಮಾರುಕಟ್ಟೆಯಲ್ಲಿ ಮಂಗಳವಾರ ಮತ್ತು ಗುರುವಾರ ಸೌದಾದ ಮೂಲಕ (ಮುಕ್ತ ಹರಾಜು) ಮಾರಾಟ ನಡೆಯುತ್ತಿತ್ತು. ಕಾಲಾಂತರದಲ್ಲಿ ರವಿವಾರದಂದು ಸಹ ಸೌದಾ ನಡೆಸುವದನ್ನು ಪ್ರಾರಂಭಿಸಿದರು. ಹತ್ತಿಯನ್ನು ಟೆಂಡರ್ ಮೂಲಕ ಮಾರಾಟ ಮಾಡಲಾಗುತ್ತಿತ್ತು.

ಪಿ. ಜಿ. ಅಂಗಡಿಯವರನ್ನು ಸಂದರ್ಶಿಸಿದಾಗ ಅವರು ಬೆಲ್ಲದ ಮಾರಾಟದ ಪ್ರಮಾಣ ಮತ್ತು ಆವಕದ ಪ್ರಮಾಣವನ್ನು ವಿವರಿಸುವಾಗ ಅವರ ಅಡತಿಯಲ್ಲಿ "ಒಂದೇ ದಿನದಲ್ಲಿ ೧೮೦೦೦ (೩೦ ಕಿ.ಗ್ರಾಂ) ಪೆಂಟೆಗಳ ಆವಕಾಗಿತ್ತು. ಮತ್ತು ಅದೇ ದಿನ ಆ ಎಲ್ಲ ಪೆಂಟೆಗಳು ವಿಕ್ರಿಯಾಗಿತ್ತು" ಎಂದು ತಿಳಿಸಿದರು. ಇದರಿಂದ ಪೇಟೆಯಲ್ಲಿಯ ಬೆಲ್ಲದ ಆವಕ ಮತ್ತು ಮಾರಾಟದ ಪ್ರಮಾಣ ಎಷ್ಟಿತ್ತೆಂದು ಗಮನಿಸಲು ಸಾಧ್ಯ.

೩.೩ **ಮುಖ್ಯ ಮಾರುಕಟ್ಟೆಯಾಗಿ ಕಾರ್ಯನಿರ್ವಹಣೆ :** ತೀವ್ರಗತಿಯಲ್ಲಿ ಬೆಳೆಯುತ್ತಿರುವ ಮಾರುಕಟ್ಟೆಗೆ ಸ್ಥಳವು ವಿಶಾಲವಾಗಿರದ ಕಾರಣ, ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಪಾವತಿಸಿದ ಸೆಸ್ ಪ್ರಮಾಣವು ಜಮಖಂಡಿಯ ಮುಖ್ಯ ಮಾರುಕಟ್ಟೆಗಿಂತ ಅಧಿಕವಾಗಿದ್ದ ಕಾರಣ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಪ್ರಮುಖ ಹಾಗೂ ಗಣ್ಯ ವ್ಯಾಪಾರಸ್ಥರ ನಿಯೋಗವು ಅಧಿಕಾರಿಗಳನ್ನು ಭೇಟಿಯಾಗಿತ್ತು. ಈ ಸಂದರ್ಭದಲ್ಲಿ ಮಹಾಲಿಂಗಪುರಕ್ಕೆ ಸ್ವತಂತ್ರ ಹಾಗೂ ಪ್ರಮುಖ ಮಾರುಕಟ್ಟೆಯ ಸ್ಥಾನ ಒದಗಿಸುವಂತೆ ಬಲವಾಗಿ ವಾದ ಮಂಡಿಸಿತು. ಪರಿಣಾಮವಾಗಿ ೧೯೮೭ ರ ಸೆಪ್ಟಂಬರ್ ತಿಂಗಳಿನ ೯ ನೇ ತಾರೀಖು ಬುಧವಾರದಂದು ಸಮಿತಿಯು ಮಹಾಲಿಂಗಪುರದ ಧವಳೇಶ್ವರ ಹಾಗೂ ಅವರಾದಿ ರಸ್ತೆಯಲ್ಲಿ ೨೭-೩೬ ಎಕರೆಯ ಶ್ರೀ ಸಿ. ಆರ್. ಕುಳ್ಳೊಳ್ಳಿಯವರ ಮಾಲ್ಕಿಯಲ್ಲಿದ್ದ ಜಾಗಾ ಖರೀದಿಸಿ ಈ ಪ್ರದೇಶದ ಆವರಣದಲ್ಲಿ ಪ್ರಕಟಣೆಯ ಸಂಖ್ಯೆ - ನಂ. ಎಸ್.ಎಂ.ಡಿ./೨೦೫/ರ/೮೫ (೧), ಪ್ರಕಟಣೆ ದಿನಾಂಕ ಸೆಪ್ಟಂಬರ್ ೧, ೧೯೮೭ ರ ಮಂಗಳವಾರ, "ಕೃಷಿ ಉತ್ಪನ್ನಗಳ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ" ಎಂಬ ನಾಕಮಕರಣದಿಂದ ಮುಖ್ಯಮಾರುಕಟ್ಟೆಯಾಗಿ ೨೪-೧೨-೧೯೮೭ ರಿಂದ ಕಾರ್ಯಾಚರಣೆ ಪ್ರಾರಂಭಿಸಿತು. ಈ ಮಾರುಕಟ್ಟೆಯ ಕ್ಷೇತ್ರವು ಇಡೀ ಮುಧೋಳ ತಾಲ್ಲೂಕನ್ನು ಒಳಗೊಂಡಿದೆ.

ಮುಧೋಳ ತಾಲ್ಲೂಕಾ ಸ್ಥಾನದಲ್ಲಿದ್ದರು ಅಲ್ಲಿ ವ್ಯವಹರಿಸುವ ಕೃಷಿ ಉತ್ಪನ್ನಗಳ ಸಂಖ್ಯೆ ಮತ್ತು ಆವಕ ಹಾಗೂ ಮಾರಾಟದ ಮೌಲ್ಯದ ಪ್ರಮಾಣ ಕಡಿಮೆ ಇದ್ದಕಾರಣ ಮಹಾಲಿಂಗಪುರಕ್ಕೆ ಮುಖ್ಯ ಮಾರುಕಟ್ಟೆಯ ಸ್ಥಾನ ಲಭಿಸಿತು. ಇದಕ್ಕೆ ಮುಧೋಳ ಮತ್ತು ಲೋಕಾಪುರದ ಮಾರುಕಟ್ಟೆಗಳು ಉಪ-ಮಾರುಕಟ್ಟೆಯಾಗಿವೆ. ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯು ತಾಲ್ಲೂಕಾ ಸ್ಥಳವನ್ನು ಬಿಟ್ಟು ಆ ತಾಲ್ಲೂಕಿನ ಪ್ರಮುಖ ಪಟ್ಟಣಕ್ಕೆ ಲಭಿಸಿದ್ದು ಇಡೀ ಕರ್ನಾಟಕದಲ್ಲಿಯೇ ವಿಶೇಷವೆಂದು ಹೇಳಲಾಗುತ್ತದೆ. ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯು ಮೊದಲು ಬೆಲ್ಲದ ಮಾರುಕಟ್ಟೆಗೆ ಪ್ರಸಿದ್ಧವಾಗಿತ್ತು. ೨೪-೧೨-೧೯೮೭ ರಂದು ಕಾರ್ಯಾಚರಣೆ ಆರಂಭಿಸಿದ ಈ ಮುಖ್ಯ ಮಾರುಕಟ್ಟೆಯು ೨೦ ವರ್ಷ ಇತಿಹಾಸವನ್ನು ಹೊಂದಿದೆ.

ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ಮುಖ್ಯ ಮಾರುಕಟ್ಟೆಯಾಗಿ ಪರಿವರ್ತಿಸುವ ಪೂರ್ವದಲ್ಲಿ ಇಕ್ಕಟ್ಟಾದ ರಸ್ತೆ ಸಂಚಾರದ ತೊಂದರೆ ಸುವ್ಯವಸ್ಥಿತ ಅಡತಿ ಅಂಗಡಿಗಳ ಕೊರತೆ, ಗೋದಾಮುಗಳ ಕೊರತೆ, ಉತ್ಪನ್ನಗಳ ಆವಕದ ಪ್ರಮಾಣದಲ್ಲಿ ಗಣನೀಯ ಏರಿಕೆ ಮುಂತಾದವುಗಳು ಸಮಸ್ಯೆಗೆ ಕಾರಣವಾದವು. ಈ ಸಮಸ್ಯೆಗಳನ್ನು ನಿವಾರಿಸುವದಕ್ಕಾಗಿ ೧೯೮೭ ರ ಪೂರ್ವದಲ್ಲಿ ಹೊರವಲಯದಲ್ಲಿ ವಿಶಾಲವಾದ ಪ್ರದೇಶದಲ್ಲಿ (೨೭-೩೬ ಎಕರೆ) ಅಂಗಡಿ ಮುಗ್ಗಟ್ಟು, ಪ್ರಾಂಗಣ, ಹರಾಜುಕಟ್ಟೆ, ಗೋದಾಮು, ವಿಶಾಲ ರಸ್ತೆ ಮುಂತಾದ ಮೂಲಭೂತ ಸೌಲಭ್ಯ ಒದಗಿಸಲಾಯಿತು. ಪ್ರಾರಂಭದಲ್ಲಿ ಅಡತಿದಾರರಿಗೆ ಅಂಗಡಿ ಹಾಗೂ ಗೋದಾಮು ಕಟ್ಟಲು ಅನುಕೂಲವಾಗುವಂತೆ ೧೫೫' X ೬೦' ದ ಪ್ಲಾಟ್‌ಗಳನ್ನು ರೂ. ೧೮೦೦/- ಗಳಿಗೆ 'ಅನುಮತಿ' ಪಡೆದ ವರ್ತಕರಿಗೆ ಹಂಚಲಾಯಿತು.

೩.೪ **ಉಪ-ಮಾರುಕಟ್ಟೆಗಳು :** ಮುಧೋಳದ ಉಪ-ಮಾರುಕಟ್ಟೆಯನ್ನು ಪ್ರಕಟಣೆ ಸಂಖ್ಯೆ : ನಂ. ಎಸ್.ಎಮ್.ಡಿ/೨೦೫/ರ/೮೫(೧) ಮತ್ತು ಪ್ರಕಟಣೆ ದಿನಾಂಕ ಸೆಪ್ಟೆಂಬರ್ ೧, ೧೯೮೭ ರ ಮಂಗಳವಾರದರ ಅನ್ವಯ ೧೮-೩೨ ಎಕರೆ ಜಾಗೆಯಲ್ಲಿನ ವಿಶಾಲವಾದ ಪ್ರದೇಶದಲ್ಲಿ ದಿನಾಂಕ: ೦೯-೦೯-೧೯೮೭ ರಂದು ವ್ಯವಹಾರದ ವಹಿವಾಟುಗಳನ್ನು ಪ್ರಾರಂಭಿಸಲಾಗಿದೆ. ಈ ಉಪ ಮಾರುಕಟ್ಟೆಯಲ್ಲಿ, ಗೋವಿನಜೋಳ, ಶೇಂಗಾ, ಜೋಳ, ಸಜ್ಜೆ, ಗೋದಿ, ಸೂರ್ಯಪಾನ, ಹತ್ತಿ (ಸಿಓ-೨), ಸದಕ (ಜವೆಗೋದಿ), ಕಡಲೆ, ಜೋಳ ಮತ್ತು ಕುಸುಬಿ ಮುಂತಾದ ದವಸ-ಧಾನ್ಯಗಳ ವಹಿವಾಟು ನಡೆಯುತ್ತದೆ. ಮುಧೋಳದ ಸಂತೆಯು ಶುಕ್ರವಾರದಂದು ನಡೆಯುತ್ತದೆ.

ಲೋಕಾಪುರ ಉಪ-ಮಾರುಕಟ್ಟೆಯು ಸಹ ಅದೇ ಪ್ರಕಟನೆ ಮತ್ತು ದಿನಾಂಕದಿಂದ ಕಾರ್ಯಪ್ರವೃತ್ತವಾಗುವಂತೆ ೮-೧೯ ಎಕರೆ ಪ್ರದೇಶದಲ್ಲಿ ದಿನಾಂಕ : ೦೯-೦೯-೧೯೮೭ ರಂದು ಪ್ರಾರಂಭಿಸಲಾಯಿತು. ಈ ಉಪಮಾರುಕಟ್ಟೆಯಲ್ಲಿ ಗೋವಿನಜೋಳ, ಕಡಲೆ, ಹತ್ತಿ, ಶೇಂಗಾ, ಸಜ್ಜೆ, ಸೂರ್ಯಪಾನ ಮುಂತಾದ ಪ್ರಮುಖ ಉತ್ಪನ್ನಗಳ ವ್ಯವಹಾರದ ವಹಿವಾಟು ನಡೆಯುತ್ತದೆ.

ಲೋಕಾಪುರದಲ್ಲಿ ಸಂತೆಯು ಮಂಗಳವಾರ ನಡೆಯುತ್ತದೆ. ಮುಂದೆ ನೀಡಿರುವ ಕೋಷ್ಟಕದಿಂದ ಮಹಾಲಿಂಗಪುರ ಮುಖ್ಯಮಾರುಕಟ್ಟೆ, ಮುಧೋಳ ಮತ್ತು ಲೋಕಾಪುರದ ಉಪಮಾರುಕಟ್ಟೆಯ ಸಾಮಾನ್ಯ ಮಾಹಿತಿಯನ್ನು ಕೋಷ್ಟಕ ೩.೨ ರಲ್ಲಿ ಗಮನಿಸಲು ಸಾಧ್ಯ.

**ಕೋಷ್ಟಕ ೩.೨**

| ವಿವರಣೆ | ಮಹಾಲಿಂಗಪುರ ಕೃ.ಉ.ಮಾ. | ಮುಧೋಳ ಕೃ.ಉ.ಮಾ. | ಲೋಕಾಪುರ ಕೃ.ಉ.ಮಾ |
|---|---|---|---|
| ೧) ಮಾರುಕಟ್ಟೆ ಪ್ರಕಾರ | ಮುಖ್ಯ ಮಾರುಕಟ್ಟೆ | ಉಪಮಾರುಕಟ್ಟೆ | ಉಪಮಾರುಕಟ್ಟೆ |
| ೨) ಸ್ಥಾಪನೆ ದಿನಾಂಕ | ಬುಧವಾರ, ೯-೯-೧೯೮೭ | ಬುಧವಾರ, ೯-೯-೧೯೮೭ | ಬುಧವಾರ, ೯-೯-೧೯೮೭ |
| ೩) ಪ್ರಕಟನೆ ಸಂಖ್ಯೆ | ಸಂ. ಎಸ್.ಎಂ.೨೦೫/ ರ/೮೫(೧) | ಸಂ.ಎಸ್ಎಂಡಿ/ ೨೦೫/ರ/೮೫(೧) | ಸಂ.ಎಸ್ಎಂಡಿ/ ೨೦೫/ರ/೮೫(೧) |
| ೪) ಪ್ರಕಟನೆ ದಿನಾಂಕ | ಮಂಗಳವಾರ ೧-೯-೧೯೮೭ | ಮಂಗಳವಾರ ೧-೯-೧೯೮೭ | ಮಂಗಳವಾರ ೧-೯-೧೯೮೭ |
| ೫) ಪ್ರಾರಂಭ ದಿನಾಂಕ | ಬುಧವಾರ ೯-೯-೧೯೮೭ | ೯-೯-೧೯೮೭ | ೯-೯-೧೯೮೭ |
| ೬) ಮಾರುಕಟ್ಟೆ ರಜಾದಿನ | ಶನಿವಾರ | ರವಿವಾರ | ರವಿವಾರ |
| ೭) ವ್ಯಾಪಾರ ವರ್ಗಾ-ಯಿಸಿದ ದಿನಾಂಕ | ಬುಧವಾರ ೯-೯-೧೯೮೭ | ಬುಧವಾರ ೯-೯-೧೯೮೭ | ಬುಧವಾರ ೯-೯-೧೯೮೭ |
| ೮) ಪೂರ್ಣವಿಳಾಸ | ಬಸವೇಶ್ವರ ಮಾರ್ಕೆಟ ಯಾರ್ಡ, ಎ.ಪಿ.ಎಂ.ಸಿ. ಮಹಾಲಿಂಗಪುರ -೫೮೭ ೩೧೨ | ಉಪಮಾರುಕಟ್ಟೆ ಮುಧೋಳ ಜಿ. ಬಾಗಲಕೋಟ ಕರ್ನಾಟಕ | ಉಪಮಾರುಕಟ್ಟೆ ಲೋಕಾಪುರ ಜಿ. ಬಾಗಲಕೋಟ ಕರ್ನಾಟಕ |
| ೯) ಇ.ಮೇಲ್ ವಿಳಾಸ | apmcmahalingpur@rediffmail.com | | |
| ೧೦ ಮಾರುಕಟ್ಟೆಯ ಒಟ್ಟು ವಿಸ್ತೀರ್ಣ | ೧೧೦೭೬೨.೦೩ | ೭೪೧೬೫.೨೨ | ೩೩೧೫೫.೭೪ |
| ಅ) ಸೌಲಭ್ಯಗಳ ಕಟ್ಟಡ | ೧೬೬೧೪ | ೭೪೧೬ | ೩೩೧೫ |
| ಬ) ಆಡಳಿತ ಕಟ್ಟಡ | ೫೫೩೪ | ೧೪೮೩ | ೬೬೩ |
| ಕ) ಆಂತರಿಕ ರಸ್ತೆ ನಿಲುಗಡೆ | ೨೭೬೯೦ | ೧೪೮೩೩ | ೬೬೩೧ |

| | | | |
|---|---|---|---|
| ಡ) ವ್ಯಾಪಾರದ ವಲಯ | ೫೫೩೮೧ | ೩೭೦೮೨ | ೧೬೫೭೭ |
| ಇ) ಭವಿಷತ್ತಿಗಾಗಿ ಕಾಯ್ದಿರಿಸಿದ ಖಾಲಿಜಾಗ | ೫೫೩೯.೦೩ | ೧೩೩೫೧.೨೨ | ೫೯೬೧.೭೧ |
| ೧೧) ಮಾರುಕಟ್ಟೆಯ ಸೇವಾ ಸ್ಥಳ | ೯೦೦ | ೯೦೦ | ೯೦೦ |
| ೧೨) ಗ್ರಾಮಪಂಚಾಯತ ಸಂಖ್ಯೆಗಳು | ೨೫ | ೨೫ | ೨೫ |
| ೧೩) ಗ್ರಾಮಗಳ ಸಂಖ್ಯೆ | ೭೮ | ೭೮ | ೭೮ |
| ೧೪) ಸ್ಥಳಗಳ ವಿವರ (ಕಿ.ಮಿ) | | | |
| ಅ) ಬಸ್‌ನಿಲ್ದಾಣ | ೨ | ೨ | ೦.೫ |
| ಬ) ರೈಲು ನಿಲ್ದಾಣ | ೪೦ | ೬೨ | ೪೦ |
| ಕ) ವಿಮಾನನಿಲ್ದಾಣ | ೧೧೦ | ೧೨೦ | ೧೦೦ |
| ಡ) ರಾಷ್ಟ್ರೀಯ ಹೆದ್ದಾರಿ | ೦೧ | -- | -- |
| ಕ) ರಾಜ್ಯಹೆದ್ದಾರಿ | ೯೦ | ೧೦೫ | ೮೦ |

ಮಾಹಿತಿ ಮೂಲ: ವೆಬ್‌ಸೈಟ್

**೩.೫ ಮಹಾಲಿಂಗಪುರದ ಸಂತೆ ಮತ್ತು ನಿತ್ಯದ ಮಾರ್ಕೆಟ್ :**

ಮಹಾಲಿಂಗಪುರದಲ್ಲಿ ಸಂತೆಯು ಮಂಗಳವಾರ ನಡೆಯುತ್ತದೆ. ಸುತ್ತಮುತ್ತಲಿನ ಹಳ್ಳಿಗಳಲ್ಲಿಯ ರೈತರು ತಮ್ಮ ಕೃಷಿ ಉತ್ಪನ್ನಗಳನ್ನು ಸಂತೆಯದಿನ ತಂದು ಮಾರುವದು ಪರಿಪಾಠ. ಈ ಸಂತೆಯಲ್ಲಿ ಕಾಯಿಪಲ್ಲೆ, ಕಾಳು-ಕಡಿ, ಕಟ್ಟಿಗೆ, ಧವಸ-ಧಾನ್ಯ ಹಾಗೂ ದಿನನಿತ್ಯದ ಬಳಕೆಯ ಸರಕುಗಳನ್ನು ಕೊಂಡುಕೊಳ್ಳಲು ಸುತ್ತಲಿನ ೧೦ ಹಳ್ಳಿಯ ಮತ್ತು ಮಹಾಲಿಂಗಪುರದ ಜನರು ನಿರತರಾಗಿರುತ್ತಾರೆ. ರೈತರು ತಾವು ಬೆಳೆದ ಕಾಯಿ-ಪಲ್ಲೆ, ಹಣ್ಣು-ಹಂಪಲ ಹಾಗೂ ಇತರ ಉತ್ಪನ್ನಗಳನ್ನು ಮಾರಾಟ ಮಾಡುತ್ತಾರೆ. ತಮಗೆ ಬೇಕಾದ ಕೃಷಿ ಹೂಡುವಳಿಗಳಾದ ಬೀಜ, ಸಸಿ, ಮತ್ತು ಅಗಿಗಳನ್ನು ಇದೇ ಸಂತೆಯಲ್ಲಿ ಖರೀದಿಸುತ್ತಾರೆ. ಅದರ ಜೊತೆಗೆ ತಮ್ಮ ದಿನನಿತ್ಯದ ಜೀವನಕ್ಕಾಗಿ ಬೇಕಾಗುವ ದಿನಸಿಗಳನ್ನು ಕಿರುಕುಳ ಹಾಗೂ ಠೋಕ ವ್ಯಾಪಾರಸ್ಥರಿಂದ ಖರೀದಿಸುತ್ತಾರೆ. ಈ ಸಂತೆಯಲ್ಲಿ ೫೦೦೦ ಕಿಂತ ಹೆಚ್ಚು ಜನರು ಕೊಳ್ಳುವ ಕಾರ್ಯದಲ್ಲಿ ಮತ್ತು ೨೦೦ ಕ್ಕೂ ಹೆಚ್ಚು ವ್ಯಾಪಾರಸ್ಥರು ಮಾರುವ ಕಾರ್ಯದಲ್ಲಿ ತೊಡಗಿರುತ್ತಾರೆ. ಸಾಮಾನ್ಯವಾಗಿ ಕೃಷಿ ಕಾರ್ಮಿಕರಿಗೆ, ಇತರ ಕಾರ್ಮಿಕರಿಗೆ ಕೂಲಿ ಅಥವಾ ಸಂಭಾವನೆ ಬಟವಡೆಯಾಗುವ ಕಾರ್ಯ ಸೋಮವಾರ ಅಥವಾ ಮಂಗಳವಾರ ನಡೆಯುತ್ತದೆ.

ಮಂಗಳವಾರ ಹೊರತು ಪಡಿಸಿ ರೈತರು ಕಾಯಿ-ಪಲ್ಲೆ, ಹೈನು ಉತ್ಪಾದನೆಗಳಾದ ಮೊಸರು, ಹಾಲು, ಬೆಣ್ಣೆ ಮತ್ತು ಹೂವು, ಸಾಂಬಾರ ಪದಾರ್ಥ, ಮೊಳಕೆ ಒಡಸಿದ ದ್ವಿದಳ ಧಾನ್ಯಗಳು ಹಾಗೂ ಹಣ್ಣು ಹಂಪಲಗಳನ್ನು ಯಲ್ಲಮ್ಮನ ಗುಡಿಯ ಹತ್ತಿರವಿರುವ ಜವಳಿ ಬಝಾರದಲ್ಲಿ ಮಾರಾಟ ಮಾಡಲಾಗುತ್ತದೆ. ಈ ದಿನಂಪ್ರತಿ ನಡೆಯುವ ಮಾರಾಟದ ಕ್ರಿಯೆಯಲ್ಲಿ ಸಂತೆಯಲ್ಲಿಯಂತೆ ಕಾಯಿಪಲ್ಲೆ ಮಾರಾಟ ಮಾಡುವ ಉದ್ಯೋಗವನ್ನು ಹೊಂದಿದ ಬಾಗವಾನರು, ರೈತರು ನಿರತರಾಗಿರುತ್ತಾರೆ. ಇದರಿಂದಾಗಿ ಮಹಾಲಿಂಗಪುರದ ಜನತೆಗೆ ತಾಜಾ ಗುಣಮಟ್ಟದ ಉತ್ಪನ್ನಗಳು ಯೋಗ್ಯಬೆಲೆಯಲ್ಲಿ ದೊರೆಯುವಂತಾಗಿದೆ. ಕೆಲವು ರೈತ ಕುಟುಂಬದವರು ಹರಾಜಕ್ಕಾಗಿ ತಮ್ಮ ಕಾಯಿ-ಪಲ್ಲೆ ದಿನಿಸಗಳನ್ನು ಇಡದೆ, ನೇರವಾಗಿ ಗ್ರಾಹಕರಿಗೆ ಯೋಗ್ಯ ಬೆಲೆಯಲ್ಲಿ ಮಾರಾಟ ಮಾಡಿ, ಬಂದ ಹಣದಿಂದ ಜೀವನಕ್ಕೆ ಬೇಕಾಗುವ ದಿನಸಿ ಸಾಮಾನುಗಳಾದ ಅಕ್ಕಿ, ಗೋದಿ, ಕಾಳು, ಎಣ್ಣೆ, ಸಕ್ಕರೆ, ಚಹಾಪುಡಿ, ತಂಬಾಕು ಮುಂತಾದ ವಸ್ತುಗಳನ್ನು ಚಿಲ್ಲರೆ ವ್ಯಾಪಾರಸ್ತರಿಂದ ಖರೀದಿಸುತ್ತಾರೆ. ಹೆಚ್ಚಿನ ಪ್ರಮಾಣದಲ್ಲಿ ಕಾಯಿ-ಪಲ್ಲೆ ಬೆಳೆದ ರೈತರು ಭಾಗವಾನರಿಗೆ ಹರಾಜಿನಲ್ಲಿಟ್ಟು ತಮ್ಮ ಸರಕುಗಳನ್ನು ಮಾರಾಟ ಮಾಡುತ್ತಾರೆ.

**೩.೬ ಜಾನುವಾರು ಮಾರುಕಟ್ಟೆ :**

೨೦೦೨-೦೩ ರಲ್ಲಿ ನೂತನ ಪ್ರಾಂಗಣಕ್ಕೆ ವರ್ಗಾಯಿಸಲಾಯಿತು. ಪ್ರತಿ ಮಂಗಳವಾರ ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಗೆ ಹೊಂದಿಕೊಂಡಂತೆ ಇರುವ ೦೬-೨೪ ಎಕರೆ ವ್ಯವಸ್ಥಿತ ಜಾನುವಾರಗಳ ಮಾರುಕಟ್ಟೆಯಲ್ಲಿ ಆಕಳು, ಎತ್ತು, ಹೋರಿ, ಎಮ್ಮೆ, ಕುರಿ, ಆಡು, ಹೋತು ಮತ್ತು ಟಗರುಗಳನ್ನು ಸಾಕುವದಕ್ಕಾಗಿ ಹಾಗೂ ಮಾಂಸದ ಉದ್ದೇಶಕ್ಕಾಗಿ ಮಾರಾಟದ ವ್ಯವಸ್ಥೆ ಇದೆ. ಇದನ್ನು ಹೊರತು ಪಡಿಸಿ ಸಂತೆಯಲ್ಲಿ ಕೋಳಿ, ಹುಂಜ ಮತ್ತು ತತ್ತಿಗಳನ್ನು ಮಾರಾಟ ಮಾಡಲಾಗುತ್ತದೆ.

ಪ್ರತಿವರ್ಷ ಕೃಷಿ ಉತ್ಪನ್ನ ಮಾರುಕಟ್ಟೆಯ ಸಮಿತಿಯ ಮುಖಂಡತ್ವದಲ್ಲಿ ಬಸವ ಜಯಂತಿ ದಿನದಿಂದ ೫ ದಿನಗಳ ಕಾಲ ದನಗಳ ಜಾತ್ರೆಯನ್ನು ಆಯೋಜಿಸಲಾಗಿರುತ್ತದೆ. ಈ ಜಾತ್ರೆಯಲ್ಲಿ ಬೇರೆ ಬೇರೆ ಮಾರುಕಟ್ಟೆ ಕ್ಷೇತ್ರದಿಂದ, ಹೊರ ಜಿಲ್ಲೆಗಳಿಂದ, ರಾಜ್ಯಗಳಿಂದ ರಾಸುಗಳು, ಎತ್ತುಗಳಲ್ಲಿ ಎಮ್ಮೆ ಮುಂತಾದ ಸಾಕು ಹಾಗೂ ಕೃಷಿ ಚಟುವಟಿಕೆಯಲ್ಲಿ ಬಳಸಲ್ಪಡುವ ದನ-ಕರುಗಳು ಬರುತ್ತವೆ. ೫ ದಿನಗಳ ಕಾಲ ನಡೆಯುವ ಈ ಜಾತ್ರೆಯಲ್ಲಿ ಎತ್ತುಗಳಿಗೆ ಹಾಗೂ ರಾಸುಗಳಿಗೆ ಹಾಗೂ ರೈತವರ್ಗದ ಜನರಿಗೆ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಲಾಗಿರುತ್ತದೆ. ವಿಜಯಿತ ಎತ್ತು; ರಾಸು ಹಾಗೂ ರೈತರಿಗೆ ಅತ್ಯಾಕರ್ಷಕ ಬಹುಮಾನಗಳನ್ನು ಕೊಡಲಾಗುತ್ತದೆ. ಈ ಜಾತ್ರೆಯಲ್ಲಿ ೧೫೦೦ ರಿಂದ ೧೬೦೦ ದನ-ಕರುಗಳ ಮಾರಾಟವಾಗುತ್ತವೆ. ಸುಮಾರು ೧೨,೦೦೦ ಕ್ಕೂ ಹೆಚ್ಚು ದನ-ಕರುಗಳು ಬಂದಿರುತ್ತವೆ.

ಬಿಜಾಪುರ ಜಿಲ್ಲಾ ಗ್ಯಾಸಟೆಯಿರ್‌ದಲ್ಲಿ ಸೂಚಿಸಿದಂತೆ ಜಾನುವಾರ ಪೇಟೆಯು ಹೊಸ ಮಾರುಕಟ್ಟೆಗೆ ಸ್ಥಳಾಂತರವಾಗುವ ಮೊದಲು ಪ್ರತಿ ಮಂಗಳವಾರದಂದು, ಚನ್ನಗಿರೇಶ್ವರ ಮಹಾವಿದ್ಯಾಲಯದ ಆವರಣದಲ್ಲಿ ನಡೆಯುತ್ತಿತ್ತು. ಆ ಸಮಯದಲ್ಲಿ ಸಂತೆಗೆ ಬರುವ ಜಾನುವಾರುಗಳ ಸಂಖ್ಯೆ ಅಂದಾಜು ೪೦೦ ರಿಂದ ೫೦೦ ಎಂದು ನಮೂದಾಗಿದೆ.(ಕೋ.೩.೩)

**ಜಾನುವಾರು ಮಾರುಕಟ್ಟೆಯ ವಹಿವಾಟು ತೋರಿಸುವ ಕೋಷ್ಟಕ ೩.೩**

| ಅ.ಸಂ. | ಜಾನುವಾರುಗಳು | ೨೦೦೨-೦೩ | | ೨೦೦೩-೦೪ | | ೨೦೦೪-೦೫ | | ೨೦೦೫-೦೬ | | ೨೦೦೬-೦೭ | | ೨೦೦೭-೦೮ | |
|---|---|---|---|---|---|---|---|---|---|---|---|---|---|
| | | ಮಾ.ಸಂ | ಮಾ.ಬೆ | ಮಾ.ಸಂ | ಮಾ.ಬೆ | ಮಾ.ಸಂ | ಮಾ.ಬೆ | ಮಾ.ಸಂ | ಮಾ.ಬೆ | ಮಾ.ಸಂ | ಮಾ.ಬೆ | ಮಾ.ಸಂ | ಮಾ.ಬೆ |
| ೧ | ಆಕಳು | ೬೭ | ೭೦೦೦ | ೬೭ | ೬೦೦೦ | ೧೩೧ | ೬೦೦೦ | ೧೧೦ | ೬೦೦೦ | ೮೫ | ೮೦೦೦ | ೯೮ | ೧೫೦೦೦ |
| ೨ | ಎತ್ತು | ೩೭೧ | ೮೦೦೦ | ೫೪೯ | ೯೦೦೦ | ೩೬೪ | ೭೦೦೦ | ೨೭೪ | ೭೦೦೦ | ೩೩೭ | ೯೦೦೦ | ೫೯೨ | ೧೫೦೦೦ |
| ೩ | ಹೋರಿ | ೧೧೨ | ೭೦೦೦ | ೭೦ | ೪೦೦೦ | ೫೨೫ | ೬೫೦೦ | ೪೩೬ | ೬೫೦೦ | ೪೦೪ | ೯೦೦೦ | -- | -- |
| ೪ | ಎಮ್ಮೆ | ೫೩೪ | ೮೫೦೦ | ೪೬೩ | ೮೦೦೦ | ೭೫೭ | ೮೦೦೦ | ೭೧೬ | ೮೦೦೦ | ೬೧೪ | ೮೦೦೦ | ೭೯೨ | ೧೨೦೦೦ |
| ೫ | ಕುರಿ | ೭೭೦೧ | ೯೦೦ | ೭೩೦೩ | ೯೦೦ | ೬೩೫೨ | ೧೫೦೦ | ೩೬೧೪ | ೧೫೦೦ | ೭೬೭೫ | ೧೫೦೦ | ೧೩೨೦೭ | ೨೦೦೦ |
| ೬ | ಆಡು | ೫೭೬೦ | ೯೦೦ | ೪೭೬೨ | ೧೦೦೦ | ೩೮೫೩ | ೧೪೦೦ | ೨೭೪೧ | ೧೪೦೦ | ೪೦೧೩ | ೧೬೦೦ | ೧೩೩೧೦ | ೧೫೦೦ |
| ೭ | ಹೋತು | -- | -- | ೧೪೫೩ | ೧೦೦೦ | ೨೧೮೬ | ೨೦೦೦ | ೨೯೧೮ | ೧೨೦೦ | ೨೧೪೭ | ೧೨೦೦ | -- | -- |
| ೮ | ಟಗರು | -- | -- | ೨೪೩೮ | ೨೦೦೦ | ೩೪೪೦ | ೨೦೦೦ | ೩೮೫೮ | ೨೦೦೦ | ೨೮೯೭ | ೨೦೦೦ | -- | -- |

ಮಾಹಿತಿ ಮೂಲ : ಕೃ.ಉ.ಮಾ. ಮಹಾಲಿಂಗಪುರ ಕಛೇರಿಯ ದಸ್ತಾವೇಜ

### ೩.೭ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ :

**ಲಕ್ಷಣಗಳು :** ಈ ಕೃಷಿ ಉತ್ಪನ್ನ ಮಾರುಕಟ್ಟೆಯು ಸರಕಾರಿ ಆದೇಶ ಸಂಖ್ಯೆ : ಸಿಎಂಡಬ್ಲ್ಯೂ: ೩೨೧:ಎಎಂಡಿ:೮೬ ದಿನಾಂಕ : ೩೧-೮-೧೯೮೭ ರ ಅನ್ವಯ ಜಮಖಂಡಿಯ ಮುಖ್ಯಮಾರುಕಟ್ಟೆಯಿಂದ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಎಂಬ ನಾಮಕರಣದಿಂದ ಸ್ವತಂತ್ರ ಮಾರುಕಟ್ಟೆಯಾಗಿ ೦೯-೦೯-೧೯೮೭ ರಂದು ಸ್ಥಾಪನೆಯಾಗಿತು. ದಿನಾಂಕ : ೨೪-೧೨-೧೯೮೭ ರಿಂದ ವ್ಯಾಪಾರ ವಹಿವಾಟುಗಳ ಕಾರ್ಯಾಚರಣೆ ಆರಂಭಿಸಿತು.

ಕರ್ನಾಟಕ ರಾಜ್ಯದಲ್ಲಿ ಬೆಲ್ಲದ ವಹಿವಾಟಿಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಮುಂಚೂಣಿಯಲ್ಲಿದೆ. ಈ ಮಾರುಕಟ್ಟೆ ಮುಧೋಳ ಮತ್ತು ಲೋಕಾಪುರದ ಕೃಷಿ ಉತ್ಪನ್ನ ಉಪ-ಮಾರುಕಟ್ಟೆಗಳನ್ನು ಹೊಂದಿದೆ. ರೈತರ ಮತ್ತು ಪೇಟೆಯ ಕಾರ್ಯಕರ್ತರ ಉತ್ತಮ ಕಾರ್ಯ ತಾತ್ವಿಕತೆಯಿಂದ, ಸಮಿತಿಯ ದಕ್ಷ ಆಡಳಿತದಿಂದ ಹಾಗೂ ಕಚೇರಿಯ ಸಿಬ್ಬಂದಿಯವರ ಸಹಕಾರದಿಂದ ವಹಿವಾಟುಗಳನ್ನು ಹೆಚ್ಚಿಸಿಕೊಳ್ಳುತ್ತ ಮುನ್ನಡೆದಿದೆ. ಇದು ನಿಯಂತ್ರಿತ ಕೃಷಿ ಉತ್ಪನ್ನ ಮಾರುಕಟ್ಟೆಯಾಗಿದ್ದು, ಅದರ ಲಕ್ಷಣಗಳು ಇಂತಿವೆ :

| | |
|---|---|
| ೧) ಸರ್ಕಾರದ ಪ್ರಕಟಣೆ | ೭) ಮಾರುಕಟ್ಟೆಯ ಶುಲ್ಕ |
| ೨) ಮಾರುಕಟ್ಟೆ ಸಮಿತಿ | ೮) ತಿರುವೆಮನೆ ಸೌಲಭ್ಯ |
| ೩) ಮಾರುಕಟ್ಟೆಯ ಕ್ಷೇತ್ರ | ೯) ನಿಯಂತ್ರಣಕ್ಕೊಳಪಟ್ಟ ಕೃಷಿ ಉತ್ಪನ್ನ |
| ೪) ವ್ಯವಹಾರದ ರೂಢಿಗಳು | ೧೦) ಬೆಲ್ಲದ ಮಾರುಕಟ್ಟೆ |
| ೫) ಅನುಮತಿ ನೀಡುವದು | ೧೧) ಮಾರುಕಟ್ಟೆ ಕ್ಷೇತ್ರದ ಪ್ರಾಂಗಣಗಳು |
| ೬) ವಾದಗಳ ನಿರ್ಣಯ | ೧೨) ಗ್ರಾಮೀಣ ಮಾರುಕಟ್ಟೆಗಳ ಅಭಿವೃದ್ಧಿ |

**೧) ಸರ್ಕಾರದ ಪ್ರಕಟಣೆ :** ಕರ್ನಾಟಕ ರಾಜ್ಯ ಸರ್ಕಾರವು ಮುಧೋಳ ತಾಲ್ಲೂಕಿನ ಕ್ಷೇತ್ರದಲ್ಲಿ ಕೃಷಿ ಉತ್ಪನ್ನಗಳ ಮಾರಾಟವನ್ನು ನಿಯಂತ್ರಿಸುವ ಉದ್ದೇಶದಿಂದ, ಸರಕಾರಿ ಆದೇಶ ಸಂಖ್ಯೆ : ಸಿಎಂಡಬ್ಲ್ಯೂ : ೩೨೧ : ಎಎಂಡಿ : ೮೬ ದಿನಾಂಕ : ೩೧-೮-೧೯೮೭ ರ ಅನ್ವಯ ಜಮಖಂಡಿ ಮಾರುಕಟ್ಟೆ ಕ್ಷೇತ್ರದಿಂದ ವಿಭಜನೆಗೊಂಡು, 'ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ' ಎಂದು ನಾಮಕರಣಗೊಂಡಿತು. ಪ್ರಕಟಣೆ ಸಂಖ್ಯೆ ನಂ. ಎಸ್.ಎಮ್.ಡಿ/೨೦೦೫/ನೋ/ ೮೫(೧) ರ ಮೂಲಕ ೧ನೇ ಸೆಪ್ಟಂಬರ್ ೧೯೮೭ ರ ಮಂಗಳವಾರದಂದು ಸ್ಥಾಪಿಸುವದಕ್ಕಾಗಿ ಪ್ರಕಟಣೆ ಹೊರಡಿಸಲಾಯಿತು. ಈ ಮಾರುಕಟ್ಟೆಯು ದಿನಾಂಕ : ೨೪-೧೨-೧೯೮೭ ರಿಂದ ಮಹಾಲಿಂಗಪುರ ಹೊರವಲಯದಲ್ಲಿ ಢವಳೇಶ್ವರ ರಸ್ತೆಯಲ್ಲಿ ೨೭-೩೬ ಎಕರೆಯ ವಿಶಾಲ ಆವರಣದಲ್ಲಿ ವಹಿವಾಟುಗಳ ಕಾರ್ಯಾರಂಭವಾಯಿತು.

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಇದು ಮುಖ್ಯ ಮಾರುಕಟ್ಟೆಯಾಗಿದೆ. ಇದಕ್ಕೆ ಎರಡು ಉಪ-ಮಾರುಕಟ್ಟೆಗಳಿವೆ. ಅವುಗಳೆಂದರೆ ತಾಲ್ಲೂಕಾ ಸ್ಥಳವಾದ ಮುಧೋಳ ಕೃಷಿ ಉತ್ಪನ್ನ ಉಪ-ಮಾರುಕಟ್ಟೆ ಮತ್ತು ಲೋಕಾಪುರದ ಕೃಷಿ ಉತ್ಪನ್ನ ಉಪ-ಮಾರುಕಟ್ಟೆ. ಈ

ಉಪಮಾರುಕಟ್ಟೆಗಳನ್ನು ಪ್ರಕಟಣೆ ಸಂಖ್ಯೆ : ನಂ. ಎಸ್.ಎಮ್.ಡಿ/೨೦೫/ರ/೮೫(೧) ರ ಪ್ರಕಾರ ದಿನಾಂಕ : ೧-೯-೧೯೮೭ ರಂದು ಪ್ರಕಟಣೆ ಹೊರಡಿಸುವದರ ಮೂಲಕ ಸ್ಥಾಪಿಸಲಾಯಿತು.

**೨) ಮಾರುಕಟ್ಟೆ ಸಮಿತಿ :** ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ ೧೯೬೬ ರ ಪ್ರಕಾರ ನಮೂದಿಸಿದಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರವು ಸಹ, ನಿಯಂತ್ರಿತ ಕೃಷಿ ಉತ್ಪನ್ನಗಳ ವಹಿವಾಟು ಮತ್ತು ವ್ಯವಹಾರದ ರೂಢಿಗಳನ್ನು ನಿಯಮಗಳ ಅನುಸಾರವಾಗಿ ಕಾರ್ಯಾಚರಣೆಯಲ್ಲಿ ತರುವದಕ್ಕಾಗಿ ಹಾಗೂ ಅವುಗಳ ಅನುಸರಣೆಯ ಮೇಲ್ವಿಚಾರಣೆಗಾಗಿ, ಮಾರುಕಟ್ಟೆಯ ಸಮಿತಿಯನ್ನು ಹೊಂದಿದೆ. ಅದರ ಆಡಳಿತವನ್ನು ಸಮಿತಿಯು ನೋಡಿಕೊಳ್ಳುತ್ತದೆ. ಈ ಸಮಿತಿಯಲ್ಲಿ ರೈತ ಪ್ರತಿನಿಧಿಗಳು-೧೧ ಜನರು (ರೈತ ಮತಕ್ಷೇತ್ರದಿಂದ) ಚುನಾವಣೆ ಮೂಲಕ ಆಯ್ಕೆ ಮಾಡಲಾಗುತ್ತದೆ. ಇದರಲ್ಲಿ ಒಂದು ಸ್ಥಾನ ರೈತ ಮಹಿಳೆಗೆ ಹಾಗೂ ತಲಾ ಒಂದೊಂದು ಸ್ಥಾನವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರು ಪ್ರತಿನಿಧಿಸುತ್ತಾರೆ. ಖರೀದಿದಾರರ ಪ್ರತಿನಿಧಿ-೧ ಜನ, ಕೃಷಿ ಮಾರಾಟ ನಿರ್ದೇಶಕರಿಂದ ನಾಮಕರಣಗೊಂಡ ಇಲಾಖಾ ಪ್ರತಿನಿಧಿ-೧, ಹಾಗೂ ಸರ್ಕಾರದಿಂದ ನಾಮಕರಣಗೊಂಡ ಪ್ರತಿನಿಧಿ-೩ ಜನರು ಸಹಕಾರಿ ಸಂಸ್ಕರಣ ಸಂಘದ ಪ್ರತಿನಿಧಿ-೧ ಜನ ಒಟ್ಟಿನಲ್ಲಿ ೧೮ ಜನ ಪ್ರತಿನಿಧಿಗಳ ಸಮಿತಿಯು ಆಡಳಿತ ನಡೆಸುತ್ತಿತ್ತು.

ರೈತ ಪ್ರತಿನಿಧಿಗಳ ಚುನಾವಣೆಗಾಗಿ ಪ್ರತಿ ಮಾರುಕಟ್ಟೆ ಕ್ಷೇತ್ರದಲ್ಲಿ ೧೧ ರೈತ ಮತಕ್ಷೇತ್ರಗಳನ್ನು ಗುರುತಿಸಲಾಗುತ್ತದೆ. ಪ್ರತಿ ಮತಕ್ಷೇತ್ರದಿಂದ ಒಬ್ಬ ರೈತನು ಮಾರುಕಟ್ಟೆಯ ಸಮಿತಿಗೆ ಚುನಾಯಿತನಾಗುತ್ತಾನೆ. ರೈತ ಪ್ರತಿನಿಧಿಯಾಗಿ ಚುನಾವಣೆಗೆ ಸ್ಪರ್ಧಿಸುವ ರೈತನ ಹೆಸರು ರೈತ ಮತಕ್ಷೇತ್ರದ ಮತದಾರರ ಪಟ್ಟಿಯಲ್ಲಿರಬೇಕು. ಅಲ್ಲದೆ ಪರಿಶಿಷ್ಟಜಾತಿ - ಪರಿಶಿಷ್ಟ ಪಂಗಡದ ಕ್ಷೇತ್ರದಲ್ಲಿ ಸ್ಪರ್ಧಿಸುವ ರೈತನು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದವನಾಗಿರಬೇಕು.

ಸಮಿತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ರೈತರೇ ಆಗಿರಬೇಕೆಂದು ಕಾನೂನಿನಲ್ಲಿ ಕಡ್ಡಾಯಗೊಳಿಸಲಾಗಿದೆ. ಅಧ್ಯಯನದ ಅವಧಿಯಲ್ಲಿಯ ಸಮಿತಿಯ ವಿವರ ಇಂತಿದೆ.

**ಕೋಷ್ಟಕ ೩.೪ ೨೦೦೦-೨೦೦೧ ರ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವಿವರ**

| ಕ್ರ.ಸಂ. | ಹೆಸರು | ಕ್ಷೇತ್ರ | ಹುದ್ದೆ |
|---|---|---|---|
| ೧) | ಶ್ರೀ ಧರೆಪ್ಪ ಸಿ. ಸಾಂಗಲಿಕರ | ಬೆಳಗಲಿ | ಅಧ್ಯಕ್ಷರು |
| ೨) | ಶ್ರೀ ಗೋವಿಂದಪ್ಪ ಯ. ಜುನ್ನೂರ | ಮೆಟಗುಡ್ಡ | ಉಪಪಾಧ್ಯಕ್ಷರು |
| ೩) | ಶ್ರೀ ರಂಗನಗೌಡ ಶಿ. ಪಾಟೀಲ | ಸೈದಾಪುರ | ಸದಸ್ಯರು |
| ೪) | ಶ್ರೀ ರಾಮನಗೌಡ ತ. ಪಾಟೀಲ | ನಾಗರಾಳ | ಸದಸ್ಯರು |
| ೫) | ಶ್ರೀ ಶ್ರೀಕಾಂತ ಕ. ಕಮಕೇರಿ | ಮಳಲಿ | ಸದಸ್ಯರು |
| ೬) | ಶ್ರೀ ಗಿರೀಶ ಪಾಂಡಪ್ಪ ಬಿ. ಪಾಟೀಲ | ಒಂಟಗೋಡಿ | ಸದಸ್ಯರು |

| | | | |
|---|---|---|---|
| ೭) | ಶ್ರೀ ಕಾಡಪ್ಪ ರಾ. ಹಿಪ್ಪಲಿ | ಶಿರೋಳ | ಸದಸ್ಯರು |
| ೮) | ಶ್ರೀ ಹಣಮಂತ ಯ. ಸಿದ್ದಾಪುರ | ಮಂಟೂರ | ಸದಸ್ಯರು |
| ೯) | ಶ್ರೀಮತಿ ಶಾಂತಾಬಾಯಿ ರ. ಉದಪುಡಿ | ಯಡಹಳ್ಳಿ | ಸದಸ್ಯರು |
| ೧೦) | ಶ್ರೀ ಹೊಳಬಸಪ್ಪ ತ. ದಂಡಿನ | ಚಿಕ್ಕೂರ | ಸದಸ್ಯರು |
| ೧೧) | ಶ್ರೀ ಭೀಮಪ್ಪ ನಿ. ಹಲಕಿ | ಲಕ್ಷಾನಟ್ಟಿ | ಸದಸ್ಯರು |
| ೧೨) | ಶ್ರೀ ಬಸವರಾಜ ಎಂ. ಥಪಳಾಪುರ | ವರ್ತಕರ | ಸದಸ್ಯರು |
| ೧೩) | ಶ್ರೀ ಸದಾಶಿವ ಹ. ಚಿಪ್ಪಲಕಟ್ಟಿ | ಸರ್ಕಾರದಿಂದ ನಾಮಕರಣ (೯೯ ನವೆಂಬರ್ ರದ್ದಾಗಿದೆ) | ಸದಸ್ಯರು |
| ೧೪) | ಶ್ರೀ ಬಸವರಾಜ ದು. ವಜ್ಜರಮಟ್ಟಿ | " | ಸದಸ್ಯರು |
| ೧೫) | ಶ್ರೀ ದುರಗಪ್ಪ ಹ. ದಡ್ಡಿಮನಿ | " | ಸದಸ್ಯರು |
| ೧೬) | ಶ್ರೀ ಬಸವರಾಜ ಶಿ. ನಾಯಕ | " | ಸದಸ್ಯರು |
| ೧೭) | ಸಂಸ್ಕರಣ ಸಹಕಾರ ಸಂಘ ಪ್ರತಿನಿಧಿ | ಖಾಲಿ ಇದೆ | ಸದಸ್ಯರು |
| ೧೮) | ಶ್ರೀ ಎಚ್. ಆರ್. ಯಂಭತ್ನಾಳ (ಸಹಾಯಕ ನಿರ್ದೇಶಕರು, ಕೃ.ಮಾ.ಇ.ಬಾಗಲಕೋಟ) | ನಿರ್ದೇಶಕರ ಪ್ರತಿನಿಧಿ | ಸದಸ್ಯರು |

**ಕೋಷ್ಟಕ ೩.೫ ೨೦೦೭-೦೮ ರ ಸಮಿತಿ ಸದಸ್ಯರ ವಿವರ :**

| | | | |
|---|---|---|---|
| ೧) | ಶ್ರೀ ಕಾಡಪ್ಪ ರಾ. ಹಿಪ್ಪಲಿ | ಮುಧೋಳ | ಅಧ್ಯಕ್ಷರು |
| ೨) | ಶ್ರೀ ಕಾಶಿಲಿಂಗ ಬ. ಹುಡೇದ | ಹೆಬ್ಬಾಳ | ಉಪಾಧ್ಯಕ್ಷರು |
| ೩) | ಶ್ರೀ ಸಂಗಪ್ಪ ಮಾ. ಹಲ್ಲಿ | ಕೆಸರಗೊಪ್ಪ | ಸದಸ್ಯರು |
| ೪) | ಶ್ರೀ ಗುರಪ್ಪ ವೆಂ. ಅಡಕಿ | ಮಹಾಲಿಂಗಪುರ | ಸದಸ್ಯರು |
| ೫) | ಶ್ರೀ ಉದಯ ವೆಂ. ಸಾರವಾಡ | ಮಳಲಿ | ಸದಸ್ಯರು |
| ೬) | ಶ್ರೀ ಬಾಬು ರಾ. ಬರಗಿ | ಉತ್ತೂರ | ಸದಸ್ಯರು |
| ೭) | ಶ್ರೀಮತಿ ಶಾಂತಾ ಕ. ಸಂಕೇಶ್ವರ | ಮಂಟೂರ | ಸದಸ್ಯರು |
| ೮) | ಶ್ರೀ ಹಣಮಂತಪ್ಪ ಅ. ಕಡಪಟ್ಟಿ | ಬೆಳಗಲಿ | ಸದಸ್ಯರು |
| ೯) | ಶ್ರೀ ತಮ್ಮಣ್ಣ ಹ. ಮಾದರ | ಚಿಂಚಕಂಡಿ ಬಿ.ಕೆ. | ಸದಸ್ಯರು |
| ೧೦) | ಶ್ರೀ ಹಣಮಂತ ಯ. ಗಸ್ತಿ | ಲೋಕಾಪುರ | ಸದಸ್ಯರು |
| ೧೧) | ಶ್ರೀ ಯಮನಪ್ಪ ಬಾ. ನದಾಫ | ವರ್ತಕರ ಕ್ಷೇತ್ರ | ಸದಸ್ಯರು |
| ೧೨) | ಶ್ರೀ ತಮ್ಮಣ್ಣ ಅ. ಪಾಟೀಲ | ಟಿಎಪಿಸಿಎಂಎಸ್ ಪ್ರತಿನಿಧಿ | ಸದಸ್ಯರು |
| ೧೩.) | ಶ್ರೀಮತಿ ವಿಜಯಲಕ್ಷ್ಮೀ ಸಹಾಯಕ ನಿರ್ದೇಶಕರು, ಕ.ಮಾ.ಬಾ. | ನಿರ್ದೇಶಕರ ಪ್ರತಿನಿಧಿ | ಸದಸ್ಯರು |

ಮಾಹಿತಿ ಮೂಲ : ವಾರ್ಷಿಕ ವರದಿ ಮತ್ತು ಸಂಕ್ಷಿಪ್ತ ವರದಿ ಕೃ.ಉ.ಮಾ.ಸ. ಮಹಾಲಿಂಗಪುರ.

ಸನ್ ೨೦೦೭-೦೮ ರಲ್ಲಿ ಸಮಿತಿಯ ಸದಸ್ಯರ ಸಂಖ್ಯೆಯು ಒಟ್ಟು ೨೧ ಇದೆ. ಅದರಲ್ಲಿ ರೈತ ಮತಕ್ಷೇತ್ರದಿಂದ ಆಯ್ಕೆಯಾದ ರೈತ ಪ್ರತಿನಿಧಿಗಳ ಸಂಖ್ಯೆ-೧೧, ವರ್ತಕರ ಪ್ರತಿನಿಧಿ-೧, ಟಿಎಪಿಸಿಎಂಎಸ್ ಪ್ರತಿನಿಧಿ-೧, ಮತ್ತು ಕೃಷಿ ಮಾರಾಟ ಇಲಾಖೆ ಬಾಗಲಕೋಟದಿಂದ, ನಿರ್ದೇಶಕರ ಪ್ರತಿನಿಧಿ-೧ ಇರುತ್ತದೆ.

೨೦೦೦-೨೦೦೧ ರಲ್ಲಿಯ ಸಮಿತಿಯಲ್ಲಿಯ ಸರ್ಕಾರದಿಂದ ನಾಮಾಂಕಿತ ಸದಸ್ಯರು-೪ ಜನರನ್ನು ನವೆಂಬರ್ ೯೯ ರಿಂದ ರದ್ದುಪಡಿಸಲಾಗಿದೆ ಹಾಗೂ ಸಂಸ್ಕರಣ ಸಹಕಾರಿ ಸಂಘದ ಪ್ರತಿನಿಧಿತ್ವವು ಎರಡು ಅವಧಿಯಲ್ಲಿ ಇಲ್ಲಾ.

ಸಮಿತಿಯು ಕೃಷಿ ಉತ್ಪನ್ನ ಮಾರುಕಟ್ಟೆ ಕ್ಷೇತ್ರದಲ್ಲಿ ಹಾಗೂ ಮಾರುಕಟ್ಟೆಗಳಲ್ಲಿ ಅನುಸರಣೆಯಲ್ಲಿ ತರಬೇಕಾದ ಕಾರ್ಯಕ್ರಮಗಳ ಬಗ್ಗೆ ತೀರ್ಮಾನ ಕೈಗೊಳ್ಳುತ್ತವೆ. ಸಮಿತಿಯ ತೀರ್ಮಾನವನ್ನು ಜಾರಿಯಲ್ಲಿ ತರಲು ಸರಕಾರಿ ಸಿಬ್ಬಂದಿಗಳಾದ ಕಾರ್ಯದರ್ಶಿ, ಸಹಕಾರ್ಯದರ್ಶಿ, ಮಾರುಕಟ್ಟೆ ಮೇಲ್ವಿಚಾರಕರು ಮೊದಲಾದ ಸಿಬ್ಬಂದಿಯ ವ್ಯವಸ್ಥೆ ಪ್ರತಿ ಮಾರುಕಟ್ಟೆಯಲ್ಲಿರುವಂತೆ ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿಯೂ ಇದೆ.

ರೈತರ, ರೈತರಿಂದ ಹಾಗೂ ರೈತರಿಗಾಗಿ ಕೃಷಿ ಉತ್ಪನ್ನ ಮಾರುಕಟ್ಟೆ : ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಸಿಮತಿಯು ನಿಯಂತ್ರಣಕ್ಕೊಳಪಟ್ಟ ಕೃಷಿ ಉತ್ಪನ್ನಗಳ ಮಾರಾಟದ ವ್ಯವಹಾರವನ್ನು ನಿಯಂತ್ರಿಸುವ ಮತ್ತು ಮಾರಾಟದ ವಿಧಾನ ಸುಧಾರಿಸುವ ಮಹತ್ವದ ಕಾರ್ಯನಿರ್ವಹಿಸುತ್ತದೆ. ಈ ಸಮಿತಿಯು ಮಾರುಕಟ್ಟೆಯಲ್ಲಿ ಅನೇಕ ಸೌಲಭ್ಯಗಳನ್ನು ಮತ್ತು ಅನುಕೂಲತೆಗಳನ್ನು ಒದಗಿಸುತ್ತದೆ. ಸಮಿತಿಯು ವ್ಯವಹಾರದ ರೂಢಿಗಳನ್ನು, ನೀತಿ-ನಿಯಮಗಳನ್ನು ವಿಧಿಸುತ್ತದೆ. ಈ ನೀತಿ-ನಿಯಮ ಉಲ್ಲಂಘಿಸಿದವರ ಮೇಲೆ ದಂಡ ವಿಧಿಸಲಾಗುತ್ತದೆ.

ಹೀಗೆ ಕೃಷಿ ಉತ್ಪನ್ನ ಮಾರುಕಟ್ಟೆ ಮಹಾಲಿಂಗಪುರದ ಸಮಿತಿಯು ಅಚ್ಚು ಕಟ್ಟುತನದಿಂದ ಕಾರ್ಯಚಟುವಟಿಕೆಗಳನ್ನು ನಿಭಾಯಿಸುವದರಿಂದ ಈ ಬೆಲ್ಲದ ಮಾರುಕಟ್ಟೆಯು ಕರ್ನಾಟಕದಲ್ಲಿಯೇ ಹೆಸರುವಾಸಿಯಾಗಿದೆ.

**೩) ಮಾರುಕಟ್ಟೆಯ ಕ್ಷೇತ್ರ :** ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ ೧೯೬೬, ಕಲಂ ೩ ರ ಪ್ರಕಾರ ಪ್ರಕಟಣೆಯನ್ನು ಹೊರಡಿಸಿದ ನಂತರ, ಆಕ್ಷೇಪಣೆಗಳು ಬಾರದಿದ್ದಲ್ಲಿ ಕಲಂ ೪ ರ ಪ್ರಕಾರ, ಪ್ರಕಟಣೆಯಲ್ಲಿ ತಿಳಿಸಿದ ಪೂರ್ಣಪ್ರದೇಶ ಅಥವಾ ಅದರಲ್ಲಿಯ ಭಾಗಶಃ ಪ್ರದೇಶವನ್ನು ಮಾರುಕಟ್ಟೆಯ ಕ್ಷೇತ್ರವೆಂದು ಮತ್ತು ಸದರಿ ಪ್ರಕಟಣೆಯಲ್ಲಿ ಎಲ್ಲಾ ವ್ಯವಸಾಯೋತ್ಪನ್ನಗಳ ಮಾರಾಟವನ್ನು ಆ ಮಾರುಕಟ್ಟೆ ಕ್ಷೇತ್ರದ ವ್ಯಾಪ್ತಿಯಲ್ಲಿ ನಿಯಂತ್ರಣಕ್ಕೊಳಪಡಿಸುವುದನ್ನು ರಾಜ್ಯ ಸರ್ಕಾರವು ಇನ್ನೊಂದು ಪ್ರಕಟಣೆಯ ಮೂಲಕ ಘೋಷಿಸುವದು, ಇದನ್ನು ಆಯಾ ಪ್ರದೇಶದಲ್ಲಿರುವ ಕನ್ನಡ ವೃತ್ತ ಪತ್ರಿಕೆಯಲ್ಲಿ ಪ್ರಕಟಿಸಲಾಗುವದು. ಹೀಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರಕ್ಕೆ

ಸಂಬಂಧಿಸಿದಂತೆ, ರಾಜ್ಯ ಸರ್ಕಾರವು ಪ್ರಕಟನೆ ಸಂಖ್ಯೆ : ಎಸ್.ಎಂ.ಡಿ/೨೦೫/ರ/೮೫(೧) ರ ಪ್ರಕಾರ ದಿನಾಂಕ : ೦೧-೦೯-೧೯೮೭ ರ ಬುಧವಾರದ ದಿನದಂದು ಪ್ರಕಟಿಸಿ ಈ ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರವು ಇಡೀ ಮುಧೋಳ ತಾಲೂಕಾ ಒಳಗೊಂಡಿರುವ ಬಗ್ಗೆ ತಿಳಿಯಿತು. ಮತ್ತು ಅದೇ ಪ್ರಕಟಣೆ ಮೂಲಕ ಈ ಮಾರುಕಟ್ಟೆಯಡಿಯಲ್ಲಿ ಮುಧೋಳ ಹಾಗೂ ಲೋಕಾಪುರದ ಉಪ-ಮಾರುಕಟ್ಟೆಗಳು ಕಾರ್ಯಾರಂಭಿಸಲು ತಿಳಿಸಲಾಯಿತು.

ಮಹಾಲಿಂಗಪುರದ ಮುಖ್ಯ ಕೃಷಿ ಉತ್ಪನ್ನ ಮಾರುಕಟ್ಟೆಯ ಮುಧೋಳ ತಾಲೂಕದ ಇಡೀ ಕ್ಷೇತ್ರವನ್ನು ಒಳಗೊಂಡಿದ್ದು, ತಾಲ್ಲೂಕಾ ಸ್ಥಳವನ್ನು ಹೊರತು ಪಡಿಸಿ ಇಡೀ ಕರ್ನಾಟಕದಲ್ಲಿ ಬೇರೆ ಪ್ರಮುಖ ವಾಣಿಜ್ಯ ನಗರಕ್ಕೆ ಕೊಟ್ಟಿರುವದು ವಿಶೇಷವಾಗಿದೆ. ಇದಕ್ಕೆ ಮೂಲಕಾರಣ ಮಾರುಕಟ್ಟೆಯಲ್ಲಿ ವ್ಯವಹರಿಸುವ ಉತ್ಪನ್ನಗಳ ಪ್ರಮಾಣ, ಉತ್ಪನ್ನದ ಮೌಲ್ಯ ಹಾಗೂ ಸರಕಾರಕ್ಕೆ ಸಂದಾಯ ಮಾಡಿದ ಸೆಸ್ ಪ್ರಮಾಣಗಳಾಗಿವೆ.

ಪ್ರತಿಯೊಂದು ಮಾರುಕಟ್ಟೆಯ ಕ್ಷೇತ್ರದಲ್ಲಿ ಒಂದು ಮಾರುಕಟ್ಟೆ ಇರತಕ್ಕದ್ದು ಮತ್ತು ಒಂದು ಅಥವಾ ಹೆಚ್ಚು ಉಪ-ಮಾರುಕಟ್ಟೆಗಳಿರಬಹುದು. ಪ್ರತಿ ಮಾರುಕಟ್ಟೆಗೆ ಮಾರುಕಟ್ಟೆ ಪ್ರಾಂಗಣವಿರತಕ್ಕದ್ದು, ಮತ್ತು ಒಂದು ಅಥವಾ ಒಂದಕ್ಕಿಂತ ಹೆಚ್ಚು ಮಾರುಕಟ್ಟೆ ಉಪ-ಪ್ರಾಂಗಣಗಳಿರಬಹುದು. ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಬೆಲ್ಲದ ಮಾರುಕಟ್ಟೆ ಪ್ರಾಂಗಣ, ಜೋಳ, ಗೋದಿ, ಗೋವಿನಜೋಳ ಮುಂತಾದವುಗಳ ಮಾರಾಟಕ್ಕೆ ಹರಾಜುಕಟ್ಟೆಗಳು ಹಾಗೂ ಜಾನುವಾರುಗಳ ಮಾರಾಟಕ್ಕಾಗಿ ಪಕ್ಕದಲ್ಲಿಯೆ ೭-೨೪ ಎಕರೆಯ ಮಾರುಕಟ್ಟೆ ಪ್ರಾಂಗಣಗಳಿವೆ.

**೪) ವ್ಯವಹಾರದ ರೂಢಿಗಳು :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದಲ್ಲಿ ಹಾಗೂ ಉಪ-ಮಾರುಕಟ್ಟೆಗಳಲ್ಲಿ ನಿಯಂತ್ರಿತ ಮತ್ತು ನಿರ್ದಿಷ್ಟಪಡಿಸಿದ ವ್ಯವಹಾರದ ರೂಢಿಗಳು ಜಾರಿಯಲ್ಲಿವೆ. ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣ ಕಾರ್ಯದಲ್ಲಿ, ಉತ್ಪನ್ನಗಳ ಬೆಲೆ ನಿರ್ಧಾರ ಮಾಡುವ, ಮಾರಾಟ ಪದ್ಧತಿಗಳು, ತೂಕದ ವ್ಯವಸ್ಥೆ ಮುಂತಾದವುಗಳ ಬಗ್ಗೆ ಸಮಿತಿಯು ನಿಗಾವಹಿಸುತ್ತದೆ. ಪೇಟೆಯಲ್ಲಿ ವರ್ತಕರು ಮತ್ತು ಮುತಾಲಿಕರು ಪ್ರಾಮಾಣಿಕತನದಿಂದ ವ್ಯವಹಾರ ಮಾಡುವದಕ್ಕಾಗಿ, ಉತ್ಪನ್ನಗಳ ಬೆಲೆಯನ್ನು ಗುಪ್ತವಾಗಿ ನಿರ್ಧರಿಸುವದನ್ನು ಪ್ರತಿಬಂಧಿಸಲಾಗಿದೆ. ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ಬೆಲ್ಲವನ್ನು ಮುಕ್ತ ಹರಾಜಿನ ಮೂಲಕ, ಹತ್ತಿಯನ್ನು ಟೆಂಡರ್ ಮೂಲಕ ಹಾಗೂ ಇತರ ನಿಯಂತ್ರಿತ ಉತ್ಪನ್ನಗಳನ್ನು ಪರಸ್ಪರ ಒಪ್ಪಿಗೆಯ ವಿಧಾನಗಳ ಮೂಲಕ ಮಾರಾಟ ಮಾಡಲಾಗುತ್ತದೆ. ಹರಾಜಿನ ಸಮಯದಲ್ಲಿ ಸಮಿತಿಯ ಪ್ರತಿನಿಧಿಯು ಹಾಜರಿರುವದರಿಂದ ಯಾವುದೇ ರೀತಿಯ ಅವ್ಯವಹಾರಗಳು ನಡೆಯುವುದಿಲ್ಲ.

ಖರೀದಿದಾರರು ಉತ್ಪನ್ನದ ಗುಣಮಟ್ಟ, ಗಾತ್ರ, ಬಣ್ಣ ಹಾಗೂ ಇತರ ಅಂಶಗಳನ್ನು ಗಮನಿಸಿ ಬಹಿರಂಗ ಹರಾಜಿನ ಮೂಲಕ ಅಥವಾ ಟೆಂಡರ್ ಹಾಕುವುದರ ಮೂಲಕ ಖರೀದಿಸುತ್ತಾರೆ. ಖರೀದಿಯಾದ ನಂತರ ಉತ್ಪನ್ನಗಳ ತೂಕ ಮಾಡುವ ಸಮಯದಲ್ಲಿ

ಸಮಿತಿಯಿಂದ ಅನುಮತಿ ಪಡೆದ ತೂಕದವರಿಂದ ತೂಕದ ಕಾರ್ಯನಡೆಯುವದು. ಉಳಿದ ಪೇಟೆ ಕಾರ್ಯಕರ್ತರ ಸಹಾಯದಿಂದ ಉತ್ಪನ್ನಗಳನ್ನು ಸಾಗಾಟ ಮಾಡಲಾಗುತ್ತದೆ.

ಈ ಮಾರುಕಟ್ಟೆಯಲ್ಲಿ ಎಲ್ಲ ವ್ಯವಹಾರಗಳು ಸಮಿತಿಯು ನಿರ್ದಿಷ್ಟಪಡಿಸಿದ ರೀತಿ-ರಿವಾಜುಗಳಿಗೆ ಅನುಗುಣವಾಗಿ ನಡೆಯುತ್ತವೆ. ಖರೀದಿದಾರರು ಏಜೆಂಟರಿಗೆ ಕೊಡಬೇಕಾದ ದಲ್ಲಾಲಿ, ಮಾರುಕಟ್ಟೆ ಶುಲ್ಕ, ಉತ್ಪನ್ನ ಹೇರುವದಕ್ಕೆ ಹಾಗೂ ಇಳಿಸುವದಕ್ಕೆ ಕೊಡಬೇಕಾದ ಹಮಾಲಿ, ವರ್ಗೀಕರಣಕ್ಕಾಗಿ ತಗಲುವ ವೆಚ್ಚ ನಿಗದಿಯಾಗಿರುತ್ತವೆ. ೧೯೮೮ ರ ತಿದ್ದುಪಡೆ ಪ್ರಕಾರ ರೈತರು ದಲ್ಲಾಲಿ ಕೊಡುವದನ್ನು ನಿಷೇದಿಸಲಾಗಿದೆ. ಅದನ್ನೂ ಖರೀದಿದಾರರೇ ಭರಿಸಬೇಕು.

ರೈತರು ತಮ್ಮ ಉತ್ಪನ್ನಗಳ ತೂಕದ ಖರ್ಚು, ಹಮಾಲಿ ಖರ್ಚು, ಸ್ವಚ್ಛಗೊಳಿಸುವ ಖರ್ಚು ಭರಿಸಬೇಕು. ದಲ್ಲಾಳಿಗಳು ಅನಧಿಕೃತವಾಗಿ ಯಾವುದೇ ದಲ್ಲಾಲಿ ಅಥವಾ ಖರ್ಚು ಹಾಕಿದ್ದೆ ಆದರೆ ದೂರುಗಳನ್ನು ಕಾರ್ಯದರ್ಶಿ ಸಲ್ಲಿಸಬೇಕು.

ಈ ಮಾರುಕಟ್ಟೆಯಲ್ಲಿ ಮ್ಯಾಟ್ರಿಕ್ ಪದ್ಧತಿಯಲ್ಲಿ ತೂಕ ಹಾಗೂ ಮಾಪನ ಮಾಡಲಾಗುತ್ತದೆ. ಗಣಕೀಕೃತ ತೂಕದ ಸಾಧನಗಳ ಮತ್ತು ಗಣಕೀಕೃತ ತೂಕದ ಕಟ್ಟೆಯ ವ್ಯವಸ್ಥೆ ಇಲ್ಲ.

ಈ ಮಾರುಕಟ್ಟೆಯಲ್ಲಿ ಉತ್ಪನ್ನವು ಮಾರಾಟವಾದ ಕೂಡಲೇ ವಿಕ್ರಿಪಟ್ಟಿ ಸಹಿತ ಹಣಪಾವತಿಯಾಗುವಂತೆ ನೋಡಿಕೊಳ್ಳಲಾಗುತ್ತದೆ. ಆದರೆ ರೈತರು ಅಡತಿಯಲ್ಲಿ (ವರ್ತಕರಿಂದ) ಮುಂಗಡ ಹಣವನ್ನು ಪಡೆದಿದ್ದರೆ, ಅದನ್ನು ಮುರಿದು ನಿವ್ವಳ ಮೊತ್ತವನ್ನು ಚೆಕ್ ಅಥವಾ ನಗದು ಹಣ ರೂಪದಲ್ಲಿ ಸಂದಾಯವಾಗುತ್ತದೆ. ದಲ್ಲಾಳಿಗಳ ಮೂಲಕ ಉತ್ಪನ್ನವನ್ನು ಮಾರಾಟ ಮಾಡಿದಲ್ಲಿ ವಿಕ್ರಿ ಪಟ್ಟಿಯನ್ನು ಮೂರು ಪ್ರತಿಯಲ್ಲಿ ಸಿದ್ಧಪಡಿಸಲಾಗುತ್ತದೆ. ಒಂದು ಪ್ರತಿ ರೈತನಿಗೆ, ಇನ್ನೊಂದು ಪ್ರತಿ ಸಮಿತಿಗೆ ಹಾಗೂ ಮತ್ತೊಂದು ಪ್ರತಿ ವರ್ತಕರ ಹತ್ತಿರ ಇರುತ್ತದೆ. ಈ ಮೂರು ಪ್ರತಿಗಳಲ್ಲಿ ರೈತರು ತಮ್ಮ ಉತ್ಪನ್ನಗಳ ಮಾರಾಟದಿಂದ ಪೇಟೆಯ ರಿವಾಜುಗಳಾದ ತೂಕದ ಶುಲ್ಕ, ಹಮಾಲಿ ಮುರಿದು ನಿಕ್ಕಿ ಹಣವನ್ನು ಕೊಟ್ಟ ಬಗ್ಗೆ ವಿವರ ಒಳಗೊಂಡಿರಬೇಕು.

ನೇರವಾಗಿ ರೈತರು ತಮ್ಮ ಉತ್ಪನ್ನವನ್ನು ಮಾರಾಟ ಮಾಡಿದ್ದರೆ, ಸಮಿತಿ ಸಿಬ್ಬಂದಿಯು ವಿಕ್ರಿಪಟ್ಟಿ ಸಿದ್ಧಪಡಿಸುತ್ತಾರೆ.

ಹೀಗೆ ಈ ಮಾರುಕಟ್ಟೆಯಲ್ಲಿ ನಿರ್ದಿಷ್ಟ ಪಡಿಸಿದ ಹಾಗೂ ನಿಯಂತ್ರಣಕ್ಕೊಳಪಟ್ಟ ರೀತಿ ರಿವಾಜುಗಳ ಮೂಲಕ ಹಾಗೂ ವ್ಯವಹಾರದ ರೂಢಿಗಳಿಂದ ವಹಿವಾಟುಗಳು ನಡೆಯುತ್ತವೆ.

**ಕೋಷ್ಟಕ ೩.೬** ೨೦೦೭-೦೮ ರಲ್ಲಿಯ ಪೇಟೆಯ ರಿವಾಜುಗಳು

| ತಪಶೀಲು | ನಿರ್ದಿಷ್ಟಪಡಿಸಿದ ದರ | | ಯಾರಿಂದ ಪಾವತಿ |
|---|---|---|---|
| | ೨೦೦೦-೦೧ | ೧-೭-೦೬ | |
| | ರೂ.ಗಳಲ್ಲಿ | ರೂ.ಗಳಲ್ಲಿ | |
| ೧) ಹಮಾಲಿ : | | | |
| ಅ) ಕೆಳಗೆ ಇಳಿಸುವದಕ್ಕೆ ಒಂದು ಪರಡಿಯಲ್ಲಿ | ೨.೫೫ | ೩.೭೫ | ಮಾರುವವರಿಂದ |
| ಇಡುವದು, ಕಲ್ಲಿಡುವದು ಮತ್ತು ಸಾಲಿನಲ್ಲಿಡಲು (ಪ್ರತಿ ಅಂಗಡಿಗೆ ಚೀಲಕ್ಕೆ) | ೦.೮೦ | ೧.೨೫ | ಮಾರುವವರಿಂದ |
| ಬ) ಹತ್ತಿ ವ ಅರಳಿ ಅಂಡಿಗೆಯಿಂದ ತೆಗೆದು ಸ್ಯಾಂಪಲ್ ಖರೀದಿದಾರರಿಗೆ ತೋರಿಸಲು (ಪ್ರತಿ ಅಂಗಡಿಗೆ ಚೀಲಕ್ಕೆ) | ೦.೧೫ | ೦.೪೦ | ಮಾರುವವರಿಂದ |
| ಕ) ತೋರಿಸಿದ ಸ್ಯಾಂಪಲ್ ಅಂಡಿಗೆಗೆ ಹಾಕಲು (ಪ್ರತಿ ಅಂಗಡಿಗೆ ಚೀಲಕ್ಕೆ) | ೦.೧೫ | ೦.೪೦ | ಮಾರುವವರಿಂದ |
| ಡ) ಅಂಡಿಗೆಗಳನ್ನು ಗ್ರೇಡ್ ಪ್ರಕಾರ ವ್ಯವಸ್ಥಿತ ರೀತಿಯಲ್ಲಿಡುವದಕ್ಕೆ (ಪ್ರತಿ ಅಂಗಡಿಗೆ ಚೀಲಕ್ಕೆ) (ತೂಕದ ಬಗ್ಗೆ ವಾಜ್ಯಬಂದಾಗ ಯಾರು ಮರು ತೂಕಾ ಮಾಡಿಸುವರು ಹಮಾಲಿ ಕೊಡಬೇಕು. ತೂಕದಲ್ಲಿ ವ್ಯತ್ಯಾಸ ಬಂದರೆ ವೆಚ್ಚವನ್ನು ದಲ್ಲಾಳಿಗಳೆ ಭರಿಸತಕ್ಕದ್ದು) | ೦.೧೫ | ೦.೪೦ | ಮಾರುವವರಿಂದ |
| ೨) ಶೇಂಗಾ ಕಾಯಿ : ಬಂದ ಮಾಲನ್ನು ಇಳಿಸಿ ತಪ್ಪಿಹಚ್ಚಲು (ಪ್ರತಿಚೀಲಕ್ಕೆ) | ೦.೫೦ | ೨.೨೫ | ಮಾರುವವರಿಂದ |
| ೩) ಆಹಾರಧಾನ್ಯ, ಎಣ್ಣೆಕಾಳು ಮುಂ. ಬಂದ ಮಾಲನ್ನು ಇಳಿಸಿ ತಪ್ಪಿಹಚ್ಚಲು (ಪ್ರತಿಚೀಲಕ್ಕೆ) | ೦.೭೫ | ೨.೨೫ | ಮಾರುವವರಿಂದ |
| ೪) ಒಣಮೆಣಸಿನಕಾಯಿ : ಬಂದ ಮಾಲನ್ನು ಇಳಿಸಲು ತಪ್ಪಿ ಹಚ್ಚಲು ಮತ್ತು ಹೊಲಿಯುವದಕ್ಕಾಗಿ (ಪ್ರತಿಚೀಲಕ್ಕೆ) | ೦.೭೫ | ೨.೨೫ | ಮಾರುವವರಿಂದ |
| ೫) ಬೆಲ್ಲ : ಇಳಿಸಿ ತಪ್ಪಿ ಹಚ್ಚಲು | | | |
| ೩೦ ಕೆ.ಜಿ. ಪೆಂಟಿ | ೦.೩೫ | ೦.೬೦ | ಮಾರುವವರಿಂದ |
| ೨೦ ಕೆ.ಜಿ. ಪೆಂಟಿ | ೦.೩೫ | ೦.೬೦ | ಮಾರುವವರಿಂದ |
| ೧೦ ಕೆ.ಜಿ. ಪೆಂಟಿ | ೦೨೦ | ೦.೩೫ | ಮಾರುವವರಿಂದ |

| | | | |
|---|---|---|---|
| ೫ ಕೆ.ಜಿ. ಪೆಂಟಿ | -- | ೦.೩೦ | ಮಾರುವವರಿಂದ |
| ೧ ಕೆ.ಜಿ. ಪೆಟ್ಟಿಗೆಗೆ | -- | ೦.೫೦ | ಮಾರುವವರಿಂದ |
| ೬) ಅರಿಷಿಣ : ೧) ಬಂದ ಮಾಲನ್ನು ಇಳಿಸಿ ತಪ್ಪಿಹಚ್ಚಲು (ಪ್ರತಿ ಚೀಲಕ್ಕೆ) | ೧.೦೦ | ೩.೦೦ | ಮಾರುವವರಿಂದ |
| ೨) ಮಾರಾಟಕ್ಕೆ ಸುರಿಯುವದು ಮತ್ತು ಮಾರಾಟಾಗಾದೆ ಇರುವ ಮಾಲನ್ನು ತುಂಬಿ ತಪ್ಪಿ ಹಚ್ಚಲು (ಪ್ರತಿ ಚೀಲಕ್ಕೆ) | ೧.೦೦ | ೩.೦೦ | ಮಾರುವವರಿಂದ |
| ೭) ಬಾಳೆ : ೧) ವಾಹನದಿಂದಿಳಿಸಲು (ಪ್ರ.ಕ್ವಿ) | -- | ೧.೨೫ | ಮಾರುವವರಿಂದ |
| ೨) ಲಾಟ್ ಮಾಡಿ ಗೊನೆಯ ಕೊಂಬೆ ಕತ್ತರಿಸಲು | -- | ೦.೬೦ | ಮಾರುವವರಿಂದ |
| ೮) ತೆಂಗು : ೧) ಇಳಿಸುವದು (ಪ್ರತಿ ೧೦೦೦ ಕಾಯಿಗೆ) | -- | ೧.೫೦ | ಮಾರುವವರಿಂದ |
| ೨) ಮಾರಾಟಕ್ಕೆ ತೆರದಿಡಲು (ಪ್ರತಿ ೧೦೦ ಕಾಯಿಗೆ) | -- | ೦.೪೦ | ಮಾರುವವರಿಂದ |
| ೩) ಎಣಿಕೆ ಮಾಡಲು (ಪ್ರತಿ ೧೦೦ ಕಾಯಿಗೆ) | -- | ೦.೪೦ | ಮಾರುವವರಿಂದ |
| ೯) ತೂಕದ ಫೀ : ಹತ್ತಿ ವ ಅರಳಿ ಅಂಗಡಿಗೆ | ೦.೩೫ | ೧.೦೦ | ಮಾರುವವರಿಂದ |
| ಚೀಲಕ್ಕೆ | ೦.೧೫ | ೦.೫೦ | ಮಾರುವವರಿಂದ |
| ೧೦) ಹಮಾಲಿ : ತುರುಕುವ, ರಾವಿಯಿಂದ ತುಂಬಲು, ಪರಡಿಯಲ್ಲಿ ಹಚ್ಚಲು, ಇನ್ನೊಂದು ಪಡಿಯಲ್ಲಿ ಕಲ್ಲು ಹಚ್ಚಲು, ಹೊಲಿಯಲು, ಸಾಲಿನಲ್ಲಿಡಲು, ನಿಟ್ಟು ಹಚ್ಚಲು, ವಾಹನದಲ್ಲಿ ಹೇರಲು | | | |
| ೧) ಶೇಂಗಾಕಾಯಿ (ಪ್ರತಿ ಚೀಲಕ್ಕೆ) | ೦.೬೦ | ೨.೯೫ | ಖರೀದಿದಾರರಿಂದ |
| ೨) ಆಹಾರಧಾನ್ಯ, ಎಣ್ಣೆಕಾಳು ಮುಂ. (ಪ್ರತಿಚೀಲಕ್ಕೆ) | ೦.೭೦ | ೩.೫೦ | ಖರೀದಿದಾರರಿಂದ |
| ೩) ಒಣಮೆಣಸಿನಕಾಯಿ (ಅಂಗಡಿಗೆ) | ೦.೫೦ | ೧.೨೫ | ಖರೀದಿದಾರರಿಂದ |
| (ಚೀಲಕ್ಕೆ) | ೦.೪೫ | ೦.೭೦ | ಖರೀದಿದಾರರಿಂದ |
| ೪) ಬೆಲ್ಲ : ೩೦ ಕೆ.ಜಿ. ಪೆಂಟಿಗೆ | ೦.೩೫ | ೦.೬೦ | ಖರೀದಿದಾರರಿಂದ |
| ೨೦ ಕೆ.ಜಿ. ಪೆಂಟಿಗೆ | ೦.೩೦ | ೦.೬೦ | ಖರೀದಿದಾರರಿಂದ |
| ೧೦ ಕೆ.ಜಿ. ಪೆಂಟಿಗೆ | ೦.೨೦ | ೦.೩೫ | ಖರೀದಿದಾರರಿಂದ |
| ೫ ಕೆ.ಜಿ. ಪೆಂಟಿಗೆ | -- | ೦.೩೦ | ಖರೀದಿದಾರರಿಂದ |
| ೧ ಪೆಟ್ಟಿಗೆಗೆ | -- | ೦.೫೦ | ಖರೀದಿದಾರರಿಂದ |
| ೫) ಬೆಲ್ಲದ ಪೆಟ್ಟಿಗೆ ಪ್ಲಾಸ್ಟಿಕ್ ಹಾಕಲು | | | |
| ೩೦ ಕೆ.ಜಿ. ಪೆಂಟಿಗೆ | ೦.೩೦ | ೦.೫೦ | ಖರೀದಿದಾರರಿಂದ |
| ೨೦ ಕೆ.ಜಿ. ಪೆಂಟಿಗೆ | -- | ೦.೫೦ | ಖರೀದಿದಾರರಿಂದ |

| | | | |
|---|---|---|---|
| ೧೦ ಕೆ.ಜಿ. ಪೆಂಟಿಗೆ | ೦.೨೦ | ೦.೪೦ | ಖರೀದಿದಾರರಿಂದ |
| ೫ ಕೆ.ಜಿ. ಪೆಂಟಿಗೆ | -- | ೦.೩೦ | ಖರೀದಿದಾರರಿಂದ |
| ೬) ಹಳೆ ಹಾಗೂ ಹೊಸ ಕಿಲ್ತಾನ ಪ್ಯಾಕಿಂಗ್ | | | |
| ಮಾಡಲು ೩೦ ಕೆ.ಜಿ. ಪೆಂಟಿಗೆ | ೦.೬೦ | ೦.೯೦ | ಖರೀದಿದಾರರಿಂದ |
| ೨೦ ಕೆ.ಜಿ. ಪೆಂಟಿಗೆ | ೦.೪೦ | ೦.೯೦ | ಖರೀದಾದರರಿಂದ |
| ೧೦ ಕೆ.ಜಿ. ಪೆಂಟಿಗೆ | ೦.೪೦ | ೦.೯೦ | ಖರೀದಿದಾರರಿಂದ |
| ೭) ಅರಿಷಿಣ ಪ್ರತಿ ಚೀಲಕ್ಕೆ | | ೩.೫೦ | ಖರೀದಿದಾರರಿಂದ |
| ೮) ತೆಂಗು : ೧) ಎಣಿಕೆ ಪ್ರತಿ ೧೦೦೦ ಕಾಯಿಗೆ | -- | ೦.೪೦ | ಖರೀದಿದಾರರಿಂದ |
| ೨) ನಿಟ್ಟು ಹಚ್ಚಲು ವಾಹನಕ್ಕೆ ಹೇರು ಪ್ರತಿ ೧೦೦೦ ಕಾಯಿಗೆ | ೧.೦೦ | ೧.೨೫ | ಖರೀದಿದಾರರಿಂದ |
| ೯) ಸಾಣಿಗೆ : ಸಾಣಿಗೆಯಲ್ಲಿ ಹಾಕುವದು ಪರತ ಚೀಲದಲ್ಲಿ ತುಂಬಲು (ಪ್ರತಿ ಚೀಲಿಗೆ) | ೦.೩೫ | ೦.೬೦ | ಖರೀದಿದಾರರಿಂದ |
| ೧೦) ಹತ್ತಿ ವ ಅರಳಿ ಮಾರಾಟದ ನಂತರ | | | |
| ವಾಹನದಲ್ಲಿ ಹೇರಲು (ಪ್ರ. ಅಂಡಿಗೆ) | | ೬.೦೦ | ಖರೀದಿದಾರರಿಂದ |
| (ಪ್ರ. ಚೀಲಿಗೆ) | | ೧.೨೫ | ಖರೀದಿದಾರರಿಂದ |
| ೧೧) ತೂಕದ ಶುಲ್ಕ : | | | |
| ಅ) ಶೇಂಗಾ, ಆಹಾರಧಾನ್ಯ ಮುಂ. ಪ್ರತಿಚೀಲಕ್ಕೆ | ೦.೩೫ | ೦.೭೫ | ಖರೀದಿದಾರರಿಂದ |
| ಬ) ಬೆಲ್ಲ(ಸರಾಸರಿ ೩೦ ಕೆ.ಜಿ.ವರೆಗೆ) | ೦.೨೫ | ೦.೪೫ | ಖರೀದಿದಾರರಿಂದ |
| ಕ) ಅರಿಷಿಣ : ಪ್ರತಿ ಚೀಲಕ್ಕೆ | ೦.೫೦ | ೦.೭೫ | ಖರೀದಿದಾರರಿಂದ |
| ಅರ್ಧ ಚೀಲಕ್ಕೆ | ೦.೨೫ | ೦.೪೦ | ಖರೀದಿದಾರರಿಂದ |
| ಡ) ಬಾಳೆಕಾಯಿ ಪ್ರತಿ ಕ್ವಿಂಟಾಲ್‌ಗೆ | -- | ೧.೫೦ | ಖರೀದಿದಾರರಿಂದ |

ಮಾಹಿತಿ ಮೂಲ : ಕೃ.ಉ.ಮಾ.ಸ.ಮಹಾಲಿಂಗಪುರದ ಪೋಟ ನಿಯಮ ೬೭

**೫) ಅನುಮತಿ ನೀಡುವದು :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಕ್ಷೇತ್ರದಲ್ಲಿ ಯಾವುದೇ ಘೋಷಿತ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವದಕ್ಕೆ ಸಂಬಂಧಿಸಿದಂತೆ ಯಾವುದೇ ಸ್ಥಳವನ್ನು ಉಪಯೋಗಿಸುವ ಸಲುವಾಗಿ ಅಥವಾ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಸಂಬಂಧಿಸಿದಂತೆ ಖರೀದಿದಾರ, ದಲಾಲ, ಬ್ರೋಕರ್, ಸಂಸ್ಕರಣಕಾರ, ತೂಕದವ, ಸರ್ವೆಯರ್, ಸಂಗ್ರಹಣಕಾರನಾಗಿ ಅಥವಾ ಯಾವುದೇ ಪೇಟೆ ಕಾರ್ಯಕರ್ತನಾಗಿ ಕಾರ್ಯನಿರ್ವಹಿಸುವ ಸಲುವಾಗಿ, ನಿರ್ದಿಷ್ಟ ಪಡಿಸಿದ ನಮೂನೆಯಲ್ಲಿ ಅರ್ಜಿ ಪಡೆದ ನಂತರ ಮಾರುಕಟ್ಟೆ ಸಮಿತಿಯು ಸೂಕ್ತ ವಿಚಾರಣೆ ಮಾಡಿ ಅನುಮತಿಯನ್ನು ನೀಡಬಹುದು ಅಥವಾ ನವೀಕರಿಸಬಹುದು, ಸೂಕ್ತವಾದ ಕಾರಣಗಳನ್ನು ನೀಡಿ ಅನುಮತಿಯನ್ನು ತಿರಸ್ಕರಿಸುವ ಅಧಿಕಾರ ಸಮಿತಿಗೆ ಇರುತ್ತದೆ.

ಮಾರುಕಟ್ಟೆ ಸಮಿತಿ ನಿರ್ದಿಷ್ಟಪಡಿಸಿದ ಶುಲ್ಕದ ಗರಿಷ್ಠ ಮಿತಿಗೊಳಪಟ್ಟು ಅನುಮತಿ ಶುಲ್ಕವನ್ನು ಪಡೆದ ನಂತರ, ನಿರ್ದಿಷ್ಟಪಡಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಹಾಕಿ ಅನುಮತಿಯನ್ನು ನೀಡುತ್ತದೆ.

ಮಾರುಕಟ್ಟೆ ಕ್ಷೇತ್ರದಲ್ಲಿ ವಾಸ್ತವವಾಗಿಲ್ಲದ ಯಾವುದೇ ವರ್ತಕನಿಗೆ ಅವನು ಖರೀದಿಸುವ ಉತ್ಪನ್ನ ಬೆಲೆಯನ್ನು ನಗದಾಗಿ ಪಾವತಿ ಮಾಡಬೇಕೆಂಬ ಷರತ್ತಿಗೊಳಪಟ್ಟು ಮಾರುಕಟ್ಟೆ ಸಮಿತಿಯಿಂದ ನಿಗದಿಗೊಳಿಸಿರುವ ಶುಲ್ಕವನ್ನು ಪಡೆದನಂತರ ಗರಿಷ್ಠ ಒಂದು ತಿಂಗಳ ಅವಧಿಗಾಗಿ ಮಾರುಕಟ್ಟೆ ಪ್ರಾಂಗಣ ಹಾಗೂ ಉಪಪ್ರಾಂಗಣದಲ್ಲಿ ವ್ಯವಹರಿಸಲು ಅನುಕೂಲವಾಗುವಂತೆ ಮಾರುಕಟ್ಟೆ ಸಮಿತಿ ಅಥವಾ ಈ ಬಗ್ಗೆ ಅಧಿಕಾರ ನೀಡಿದ್ದರೆ, ಅದರ ಅಧ್ಯಕ್ಷರು ತಾತ್ಕಾಲಿಕ ಅನುಮತಿ ನೀಡಲಾಗುತ್ತದೆ.

ಕೃಷಿ ಉತ್ಪನ್ನ ಖರೀದಿಯ ವ್ಯವಹಾರದಲ್ಲಿ ನಿರಂತರವಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಯನ್ನು ಮಾತ್ರ ಖರೀದಿದಾರನೆಂದು ಪರಿಗಣಿಸಿ ಅವನಿಗೆ ಖರೀದಿದಾರನ ಅನುಮತಿ ನೀಡಲಾಗುತ್ತದೆ.

ಮಾರುಕಟ್ಟೆಯ ಸಮಿತಿಯಿಂದ ಅನುಮತಿ ಪಡೆದುಕೊಳ್ಳದೇ ಮಾರುಕಟ್ಟೆಯ ಕ್ಷೇತ್ರದಲ್ಲಿ ಘೋಷಿತ ಕೃಷಿ ಉತ್ಪನ್ನ ಮಾಮಾರಾಟ ವ್ಯವಹಾರಕ್ಕೆ ಸಂಬಂಧಿಸಿದಂತೆ ವರ್ತಕ, ದಲಾಲ, ಬ್ರೋಕರ್, ಸಂಸ್ಕರಣಕಾರ, ರಫ್ತುದಾರ, ಆಮದುದಾರ, ಜಿನ್ನರ್, ಪ್ರೆಸರ್, ಕ್ರಷರ್, ಸಂಗ್ರಹಣಕಾರ, ದಾಸ್ತಾನುಗಾರ ಅಥವಾ ಚಿಲ್ಲರೆ ವರ್ತಕನಾಗಿ ಕಾರ್ಯನಿರ್ವಹಿಸುವಂತಿಲ್ಲ.

ನಮೂನೆ ೪೧ ರಂತೆ ಖರೀದಿದಾರ, ಬ್ರೋಕರ್, ಸಂಸ್ಕರಣಕಾರ, ದಲಾಲ, ರಫ್ತುದಾರ, ಆಮದುದಾರ, ಪ್ರೆಸರ್, ಕ್ರಷರ್, ದಾಸ್ತಾನುಗಾರ ಅರ್ಜಿ ಸಲ್ಲಿಸಬೇಕು. ನಮೂನೆ ೪೨ ರಂತೆ ಚಿಲ್ಲರೆ ವರ್ತಕನಾಗಿ ಕಾರ್ಯನಿರ್ವಹಿಸುವದಕ್ಕಾಗಿ ಹಾಗೂ ನಮೂನೆ ೪೩ ರಂತೆ ತಾತ್ಕಾಲಿಕ ವರ್ತಕನಾಗಿ ಕಾರ್ಯ ಸಲ್ಲಿಸಲು ಮೂರು ಸಂದರ್ಭಗಳಲ್ಲಿ ನಿರ್ದಿಷ್ಟ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ತಿರಸ್ಕೃತವಾದರೆ ಶುಲ್ಕವನ್ನು ಹಿಂದಿರುಗಿಸಬೇಕಾಗುತ್ತದೆ.[೨]

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದಲ್ಲಿ ಆಕರಿಸಲಾಗುತ್ತಿರುವ ವಿವಿಧ ಪೇಟೆ ಕಾರ್ಯಕರ್ತರ ಅನುಮತಿಯ ಗರಿಷ್ಠ ಶುಲ್ಕ ಇಂತಿದೆ : **ಕೋಷ್ಟಕ ೩.೭**

| ಕ್ರ.ಸಂ. | ಪ್ರವರ್ಗ | ಒಂದು ವರ್ಷಕ್ಕೆ ವಿದಿಸಿದ ಗರಿಷ್ಠ ಶುಲ್ಕ | |
|---|---|---|---|
| | | ೨೦೦೬ ಪೂರ್ವ | ೨೦೦೬ ರಲ್ಲಿಯಂತೆ |
| ೧ | ದಲಾಲ | | ರೂ. ೨೦೦/- |
| ೨ | ಖರೀದಿದಾರ | | ರೂ. ೨೦೦/- |
| ೩ | ದಾಸ್ತುಗಾರ | | ರೂ. ೧೦೦/- |
| ೪ | ರಫ್ತುದಾರ | | ರೂ. ೧೦೦/- |
| ೫ | ಟ್ರಕ್ಸ್ | | ರೂ. ೧೦೦/- |

| | | | |
|---|---|---|---|
| ೬ | ಸಂಸ್ಕರಣಕಾರ | | ರೂ. ೧೦೦/- |
| ೭ | ಆಮದುದಾರ | | ರೂ. ೧೦೦/- |
| ೮ | ಕ್ರಷರ್ಸ್ | | ರೂ. ೧೦೦/- |
| ೯ | ಹಮಾಲ | | ರೂ. ೦೦೨/- |
| ೧೦ | ತೂಕದವ | | ರೂ. ೦೧೦/- |
| ೧೧ | ಚಿಲ್ಲರೆ ವರ್ತಕ | | ರೂ. ೦೨೫/- |
| ೧೨ | ಜಿನ್ನರ್ಸ್ | | ರೂ. ೧೦೦/- |
| ೧೩ | ಚಕ್ಕಡಿಯವ | | ರೂ. ೦೦೨/- |
| ೧೪ | ವೇರ್‌ಹೌಸಮನ್ | | ರೂ. ೧೦೦/- |
| ೧೫ | ಪ್ರೆಸರ್ಸ್ | | ರೂ. ೧೦೦/- |

ಮೂಲ : ಮಹಾಲಿಂಗಪುರ ಕೃ.ಉ.ಮಾ.ಸ. ಕಚೇರಿ

**ಭದ್ರತಾ ಹಣ :** ಕೃಷಿ ಉತ್ಪನ್ನಗಳ ಮಾರಾಟದ ವ್ಯವಹಾರದಲ್ಲಿ ಬೆಲೆಯನ್ನು ತಕ್ಷಣವೇ ನಗದು ರೂಪದಲ್ಲಿ ನೀಡಬೇಕೆಂದು ಶಾಸನದಲ್ಲಿ ನಿರ್ದಿಷ್ಟಪಡಿಸಲಾಗಿದೆ. ಅದರಂತೆ ಸಾಲದ ಮೇಲೆ ವ್ಯವಹಾರ ಮಾಡುವ ವರ್ತಕರು ಮಾರುಕಟ್ಟೆ ಸಮಿತಿಗೆ ನಗದು ಭದ್ರತೆ ಹಾಗೂ ಜಾಮೀನನ್ನು ಸಲ್ಲಿಸಬೇಕಾಗುತ್ತದೆ. ಈ ರೀತಿ ಮಾರುಕಟ್ಟೆ ಸಮಿತಿಗೆ ನೀಡಬೇಕಾದ ಭದ್ರತಾ ಹಣ ಅಥವಾ ಬ್ಯಾಂಕ ಜಾಮೀನು ರೂ. ೧೦೦೦/- ಮೀರದಂತಿದೆ. ಆದರೆ ೧೯೯೧ ರಲ್ಲಿಯ ತಿದ್ದುಪಡೆ ಶಾಸನದನ್ವಯ ಭದ್ರತಾ ಹಣದ ಮೊತ್ತವನ್ನು ೫೦೦೦ ರೂಪಾಯಿ ನಗದು ಮತ್ತು ೧೦,೦೦೦/- ರೂಪಾಯಿಯ ನಿರಂತರ ಬ್ಯಾಂಕ್ ಜಾಮೀನು ಅಥವಾ ಕಳೆದ ವರ್ಷದ ಆರ್ಥಿಕ ವ್ಯವಹಾರದ ಶೇ. ೨ ಇವುಗಳಲ್ಲಿ ಹೆಚ್ಚಿನದು ಯಾವುದೋ ಅದೇ ಎಂದು ನಿಗದಿಪಡಿಸಲಾಗಿದೆ.

ಇಷ್ಟೆ ಮೊತ್ತದಷ್ಟು ಹಣ ಮತ್ತು ಬ್ಯಾಂಕ್ ನಿರಂತರ ಜಾಮೀನವನ್ನು ದಲಾಲರು ಸಹ 'ಭದ್ರತಾ ಹಣ'ವೆಂದು ಸಮಿತಿಯ ಬಳಿ ಇಡುತ್ತಾರೆ.

**೬) ವಾದಗಳ ತೀರ್ಮಾಣ :** ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದಲ್ಲಿ ನಿಯಂತ್ರಿತ ಯಾವುದೇ ಉತ್ಪನ್ನಗಳ ಮಾರಾಟದ ವ್ಯವಹಾರದಲ್ಲಿ, ಆ ಉತ್ಪನ್ನದ ಗುಣಧರ್ಮ ಅಥವಾ ತೂಕದ ಅಥವಾ ಹಣ ಸಂದಾಯ ಅಥವಾ ಮಾರಾಟ ವಿಷಯಗಳಿಗೆ ಸಂಬಂಧಿಸಿದಂತೆ, ಹಾಗೂ ಇತರ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಉತ್ಪಾದಕರ, ಕೊಳ್ಳುವವರ ಮತ್ತು ಮಾರುವವರ ಅಥವಾ ಅವರವರ ಪ್ರತಿನಿಧಿಗಳ ಮಧ್ಯೆ ಉದ್ಭವಿಸುವ ತಂಟೆಗಳನ್ನು ತೀರ್ಮಾನಿಸುವದಕ್ಕಾಗಿ ತಂಟೆ ತೀರ್ಮಾನು ಸಮಿತಿ ಇರುತ್ತದೆ. ಆಯಾ ಕ್ಷೇತ್ರದ ಮಾರುಕಟ್ಟೆ ಸಮಿತಿಯು ರೈತರು, ದಲಾಲರು ಮತ್ತು ವರ್ತಕರನ್ನೊಳಗೊಂಡ ಪಂಚಾಯಿತ್ದಾರರ ಪಟ್ಟಿಯೊಂದನ್ನು ತಯಾರಿಸಿ ಅವರನ್ನು ಕಾಲಕಾಲಕ್ಕೆ ನೇಮಿಸಲಾಗುತ್ತದೆ. ಹಾಗೂ ಸಮಿತಿಯ ಸದಸ್ಯರಲ್ಲಿ ಕೆಲವರನ್ನು ಒಳಗೊಂಡಂತೆ ಒಂದು 'ತಂಟೆ ತೀರ್ಮಾನ' ಸಮಿತಿಯನ್ನು ರಚಿಸುತ್ತದೆ.

ಮಾರುಕಟ್ಟೆಯ ಕ್ಷೇತ್ರದಲ್ಲಿಯ ಪೇಟೆಯ ಕಾರ್ಯಕರ್ತರ ಮಧ್ಯೆ ಉದ್ಭವಿಸುವ ಮಾರಾಟ ವ್ಯವಹಾರಕ್ಕೆ ಸಂಬಂಧಿಸಿದ ತಂಟೆ ತಕರಾರುಗಳನ್ನು ನ್ಯಾಯಾಲಯಕ್ಕೆ ಒಯ್ಯದೆ ಸಮಿತಿಯಿಂದಲೇ ತೀರ್ಮಾನಿಸುವ ವಿಶಿಷ್ಟವಾದ ವ್ಯವಸ್ಥೆಯಾಗಿದೆ.

ಮಾರುಕಟ್ಟೆ ಸಮಿತಿಯ ಉಪಾಧ್ಯಕ್ಷರು ಈ ಉಪಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಾರೆ. ತಂಟೆ-ತಕರಾರುಗಳನ್ನು ಕಾರ್ಯದರ್ಶಿಗಳು ಪಡೆದುಕೊಂಡು ಸಮಿತಿಗೆ ವಿಚಾರಣೆ ಹಾಗೂ ತೀರ್ಮಾನಕ್ಕಾಗಿ ರವಾನಿಸಲಾಗುತ್ತದೆ.

**೭) ಮಾರುಕಟ್ಟೆಯ ಶುಲ್ಕಗಳು :** ಮಾರುಕಟ್ಟೆಯಲ್ಲಿ ವ್ಯವಹರಿಸಿದ ನಿಯಂತ್ರಿತ ಕೃಷಿ ಉತ್ಪನ್ನ ಗಾತ್ರ ಮತ್ತು ಅವುಗಳ ಬೆಲೆಯನ್ನು ಗಮನದಲ್ಲಿಟ್ಟುಕೊಂಡು, ಮಾರುಕಟ್ಟೆ ಸಮಿತಿಗೆ ರೈತರು, ವ್ಯಾಪಾರಸ್ಥರು ಮತ್ತು ಮುತಾಲಿಕರು ಶುಲ್ಕವನ್ನು ಕೊಡಬೇಕಾಗುತ್ತದೆ. ಮಾರುಕಟ್ಟೆ ಸಮಿತಿಯು ಉತ್ತಮ ಮಾರಾಟ ವ್ಯವಸ್ಥೆಯನ್ನು ಒದಗಿಸುವದಕ್ಕಾಗಿ ಅವಶ್ಯವಾಗಿ ಬೇಕಾಗುವ ವಿವಿಧ ಸೌಕರ್ಯ ಮತ್ತು ಸೌಲಭ್ಯ ಹಾಗೂ ಸೇವೆಗಳನ್ನು ಒದಗಿಸಿದಕ್ಕಾಗಿ ಮಾರುಕಟ್ಟೆಯ ಶುಲ್ಕವನ್ನು ವಸೂಲು ಮಾಡುತ್ತದೆ ಹಾಗೂ ಈ ಮಾರುಕಟ್ಟೆಯ ಶುಲ್ಕವು ಮಾರುಕಟ್ಟೆ ಸಮಿತಿಯ ಪ್ರಮುಖ ಆದಾಯದ ಮೂಲಾಗಿರುತ್ತದೆ.

ಮಾರಾಟವಾದ ಘೋಷಿತ ಕೃಷಿ ಉತ್ಪನ್ನದ (ಜಾನುವಾರ ಹೊರತುಪಡಿಸಿ) ಮೌಲ್ಯದ ಪ್ರತಿಶತ ೨ಕ್ಕೆ ಮೀರದಂತೆ ಖರೀದಿದಾರನಿಂದ ಮಾರುಕಟ್ಟೆಯ ಶುಲ್ಕವನ್ನು ಆಕರಣೆ ಮಾಡಿ ವಸೂಲು ಮಾಡುವ ಅಧಿಕಾರ ಸಮಿತಿಗಿದೆ. ಜಾನುವಾರಗಳ ಮಾರಾಟಕ್ಕೆ ಸಂಬಂಧಿಸಿದಂತೆ ಕುರಿ ಮತ್ತು ಆಡು ಹೊರತು ಪಡಿಸಿ ಪ್ರತಿಯೊಂದಕ್ಕೆ ರೂ. ೧೦/- ಮತ್ತು ಕುರಿ, ಆಡುಗಳಿಗೆ ಸಂಬಂಧಿಸಿದಂತೆ ರೂ. ೫/- ಶುಲ್ಕವನ್ನು ವಸೂಲ ಮಾಡುತ್ತಿದೆ.

**೮) ತಿರುವೆಮನೆ (ಕ್ಲಿಯರಿಂಗ್ ಹೌಸ್) :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರವು ಈ ವಿಶಿಷ್ಟ ತೆರನಾದ ಹಾಗೂ ಇಡೀ ಕರ್ನಾಟಕದಲ್ಲಿಯೇ ವಿಶೇಷವಾದ ವ್ಯವಸ್ಥೆ ಅಳವಡಿಸಿದೆ. ಈ ವ್ಯವಸ್ಥೆಯು ನೆರೆಯ ರಾಜ್ಯವಾದ ಮಹಾರಾಷ್ಟ್ರದ ಸಾಂಗಲಿ ಮತ್ತು ಕೋಲಾಪುರದ ಕೃಷಿ ಉತ್ಪನ್ನ ಮಾರುಕಟ್ಟೆಯ ಅನುಕರಣೆಯಾಗಿದೆ.

ಸಮಿತಿಯ ಮಾರುಕಟ್ಟೆಯ ಕ್ಷೇತ್ರದಲ್ಲಿ ನಿಯಂತ್ರಣಕ್ಕೊಳಪಡಿಸಿದ ಕೃಷಿ ಉತ್ಪನ್ನಗಳನ್ನು ವ್ಯವಹರಿಸುತ್ತಿರುವ ಖರೀದಿದಾರರು, ದಲಾಲರಿಗೆ ತ್ವರಿತವಾಗಿ ಹಣ ಸಂದಾಯ ಮಾಡುವಗೋಸ್ಕರ, ದಲಾಲ ವರ್ತಕರ ಸಂಘ ಮಹಾಲಿಂಗಪುರ ಇವರ ಸಹಯೋಗದೊಂದಿಗೆ ಸಮಿತಿಯು 'ಕ್ಲಿಯರಿಂಗ್ ಹೌಸ್' ಎಂಬ ಪದ್ಧತಿಯನ್ನು ಸನ್ ೧೯೮೯ ರಿಂದ ಜಾರಿಯಲ್ಲಿ ತಂದಿರುತ್ತದೆ.

ಸಮಿತಿಯ ಮಾರುಕಟ್ಟೆ ಪ್ರಾಂಗಣಕ್ಕೆ ಮಾರಾಟಕ್ಕಾಗಿ ಬೆಲ್ಲ, ಹತ್ತಿ ಮತ್ತು ಅರಿಷಿಣ ಹೆಚ್ಚಿನ ಪ್ರಮಾಣದಲ್ಲಿ ಬರುತ್ತಿದ್ದು ಸದರ ಉತ್ಪನ್ನಗಳ ವ್ಯವಹಾರದಲ್ಲಿ ಖರೀದಿದಾರರು ದಲಾಲರಿಗೆ ಹಣ ಸಂದಾಯ ಮಾಡುವಗೋಸ್ಕರ ವ್ಯವಸ್ಥೆಯಿದೆ. ಖರೀದಿದಾರ ದಲಾಲರಿಂದ

ಬೆಲ್ಲವನ್ನು ಖರೀದಿಸಿದ ೨೫ ದಿನಗಳೊಳಗಾಗಿ, ಹತ್ತಿ ಮತ್ತು ಅರಿಷಿಣ ಖರೀದಿಸಿದ ೩೫ ದಿನದೊಳಗಾಗಿ ಚೆಕ್‌ನ್ನೂ 'ಕ್ಲಿಯರಿಂಗ್ ಹೌಸ್'ನಲ್ಲಿ ಹಾಕಬೇಕು. ನಿರ್ದಿಷ್ಟ ಪಡಿಸಿದ ಅವಧಿಯೊಳಗಾಗಿ ಚೆಕ್ ಹಾಕದಿದ್ದರೆ, ಮಾರನೆಯದಿನ ಖರೀದಿಯಲ್ಲಿ ಪಾಲ್ಗೊಳ್ಳದಂತೆ ತಡೆಯಲಾಗುತ್ತದೆ.

ಖರೀದಿದಾರನು ತಾನು ಖರೀದಿಸಿದ ಉತ್ಪನ್ನದ ಮೌಲ್ಯವನ್ನು ಪಾವತಿಸಲು ಈ ಮುನ್ನಾ ಉದ್ದೇಶಪೂರ್ವಕ ಅಥವಾ ವಿಳಂಬ ನೀತಿಯನ್ನು ಅನುಸರಿಸುತ್ತಿದ್ದರು ಇದರಿಂದ ದಲಾಲರಿಗೆ ವ್ಯವಹರಿಸುವದು ಕಷ್ಟವಾಗುತ್ತಿತ್ತು ಹಾಗೂ ಹಲವು ಬಾರಿ ಹೆಚ್ಚಿನ ಪ್ರಮಾಣದ ತಂಟೆ-ತಕರಾರುಗಳಿಗೆ ದಾರಿಮಾಡಿಕೊಡುತ್ತಿತ್ತು. ಇವುಗಳನ್ನು ತಪ್ಪಿಸಲು ಹಾಗೂ ಬೆಲೆಯ ಮೊತ್ತವನ್ನು ವ್ಯವಹಾರದ ರೂಢಿಗಳಿಗೆ ಅನುಗುಣವಾಗಿ ನಿರ್ದಿಷ್ಟಪಡಿಸಿದ ಅವಧಿಗೆ ಪಾವತಿಯಾಗುವಂತೆ ಅನುಕೂಲ ಒದಗಿಸುವ ವ್ಯವಸ್ಥೆ ಇದಾಗಿದೆ.

**೯) ನಿಯಂತ್ರಣಕ್ಕೊಳಪಟ್ಟ ಕೃಷಿ ಉತ್ಪನ್ನಗಳು :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಮಾರುಕಟ್ಟೆ ಕ್ಷೇತ್ರದಲ್ಲಿ ಮಾರಾಟಾಗುವ ಕೃಷಿ ಉತ್ಪನ್ನಗಳ ನಿಯಂತ್ರಣಕ್ಕೆ ಒಳಪಡಿಸುವದಕ್ಕೆ ರಾಜ್ಯ ಸರ್ಕಾರ ಒಂದು ಅಧಿಕೃತ ಪ್ರಕಟಣೆಯನ್ನು ಹೊರಡಿಸುತ್ತದೆ. ಹೀಗೆ ಯಾವ ಉತ್ಪನ್ನಗಳನ್ನು ನಿಯಂತ್ರಣಕ್ಕೆ ತರಬೇಕೆಂಬುದನ್ನು ನಿರ್ಧರಿಸುವ ಅಧಿಕಾರ ರಾಜ್ಯ ಸರ್ಕಾರಕ್ಕೆ ಇರುತ್ತದೆ. ಸಾಮಾನ್ಯವಾಗಿ ಆ ಮಾರುಕಟ್ಟೆಯ ಕ್ಷೇತ್ರದಲ್ಲಿ ವಿಪುಲವಾಗಿ ಬೆಳೆಯುವ ಹಾಗೂ ಬೃಹತ್ ಪ್ರಮಾಣದಲ್ಲಿ ಆವಕಾಗುವ ಮತ್ತು ಮಾರಾಟದ ಮೌಲ್ಯ ಅಧಿಕವಿರುವ ಉತ್ಪನ್ನಗಳನ್ನು ನಿಯಂತ್ರಣದ ಕಕ್ಷೆಯಲ್ಲಿ ತರುವದಕ್ಕಾಗಿ ಪ್ರಕಟಣೆಯನ್ನು ಹೊರಡಿಸುತ್ತದೆ. ಯಾಕೆಂದರೆ ಎಲ್ಲಾ ವ್ಯವಸಾಯೋತ್ಪನ್ನಗಳಿಗೆ ಅನ್ವಯವಾಗುವಂತೆ ರಾಜ್ಯದ ಎಲ್ಲಾ ಪ್ರದೇಶದಲ್ಲಿಯೂ ಏಕಕಾಲದಲ್ಲಿ ನಿಯಂತ್ರಣವನ್ನು ಜಾರಿಗೊಳಿಸುವದು ಸಾಧ್ಯವಾಗದಿರಬಹುದು. ಅಧ್ಯಯನದ ಅವಧಿಯಲ್ಲಿ ಅಂದರೆ ೨೦೦೦-೨೦೦೧ ರಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಮಹಾಲಿಂಗಪುರದ ಸಮಿತಿಯು ಕೇವಲ ೧೮ ಉತ್ಪನ್ನಗಳನ್ನು ನಿಯಂತ್ರಣಕ್ಕೊಳಪಡಿಸಲಾಗಿತ್ತು. ಅವುಗಳೆಂದರೆ : ೧. ಹತ್ತಿ(ಹಿಂಜಿದ ಮತ್ತು ಹಿಂಜಿಲ್ಲದ) ೨.ಶೇಂಗಾ (ಕಾಯಿ ಮತ್ತು ಕಾಳು) ೩.ಕುಸುಬಿ ೪.ಕಡಲೆ(ಇಡಿ ಮತ್ತು ಒಡೆದ) ೫.ಬೆಲ್ಲ ೬. ಜೋಳ ೭. ಮೆಕ್ಕೆಜೋಳ ೮.ಗೋದಿ ೯. ಸಜ್ಜೆ ೧೦. ಸೂರ್ಯಪಾನ ೧೧. ಈರುಳ್ಳಿ ೧೨. ತೊಗರಿ(ಇಡಿ ಮತ್ತು ಒಡೆದ) ೧೩.ಒಣಮೆಣಸಿನಕಾಯಿ ೧೪. ಜವೆಗೋದಿ(ಸದಕ) ೧೫. ಅರಿಷಿಣ ೧೬. ಜಾನುವಾರು ೧೭. ಕುರಿ ಮತ್ತು ೧೮. ಮೇಕೆ.[೩]

ಸಧ್ಯದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರದಲ್ಲಿ ಒಟ್ಟು ೧೧೩ ಕೃಷಿ ಉತ್ಪನ್ನಗಳ ಮಾರಾಟವನ್ನು ನಿಯಂತ್ರಣಕ್ಕೊಳಪಡಿಸಲಾಗಿದೆ.[೪]

**೯.ಅ) ಬೆಲ್ಲದ ಮಾರುಕಟ್ಟೆಯೆಂದು ಪ್ರಸಿದ್ಧಿ :** ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಗೆ ಬೆಲ್ಲದ ಮಾರುಕಟ್ಟೆ ಎಂದೇ ಸುತ್ತಮುತ್ತಲಿನ ರಾಜ್ಯಗಳು ಹಾಗೂ ಕರ್ನಾಟಕದಾದ್ಯಂತ ಪ್ರಸಿದ್ಧಿಯನ್ನು ಪಡೆದಿರುವದು ಹೆಮ್ಮೆಯ ಸಂಗತಿ. ಈ ಮಾರುಕಟ್ಟೆ ಬೆಲ್ಲವನ್ನು ರಾಜ್ಯದ ವಿವಿಧ

ಸ್ಥಳಗಳಿಗೆ ರವಾನೆಯಾಗುತ್ತದೆ. ಹೆಚ್ಚಿನ ಪ್ರಮಾಣದ ಬೆಲ್ಲವು ಪರರಾಜ್ಯಗಳಾದ ಗುಜರಾತ, ರಾಜಸ್ಥಾನ, ಗೋವಾ ಇನ್ನಿತರ ರಾಜ್ಯಗಳಿಗೆ ರವಾನೆಯಾಗುತ್ತಿದೆ. ಅಂದರೆ ಸಾಂಗ್ಲಿ ಹಾಗೂ ಕೊಲ್ಲಾಪುರ ಬೆಲ್ಲದ ಮಾರುಕಟ್ಟೆಗಳಂತೆ ಹೆಸರುವಾಸಿಯಾಗಿದೆ. ಆದರೆ ದುರ್ದೈವವಸಾತ ಈ ಪೇಟೆಯ ಬೆಲ್ಲವನ್ನು 'ಕೊಲ್ಹಾಪುರ ಬ್ರ್ಯಾಂಡ್'ನಲ್ಲಿ ಖರೀದಿದಾರು ಕಳಿಸುತ್ತಾರೆ. ಇದು ಈ ಭಾಗದ ರೈತರ ಹಿತಕ್ಕೆ ಧಕ್ಕೆಯುಂಟು ಮಾಡುತ್ತದೆ. ಇಂತಹ ವ್ಯವಸ್ಥೆ ತಪ್ಪಿ ನಮ್ಮ ರಾಜ್ಯದ ಸ್ಥಾನಮಾನ ಕಲ್ಪಿಸುವ ನಿಜವಾದ ಪ್ರಯತ್ನ ನಡೆಯಬೇಕಿದೆ.

**೧೦) ಮಾರುಕಟ್ಟೆ ಕ್ಷೇತ್ರದಲ್ಲಿಯ ಪ್ರಾಂಗಣಗಳು :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದಲ್ಲಿ ಎರಡು ಪ್ರಾಂಗಣಗಳಿವೆ. ಒಂದು ಪ್ರಾಂಗಣವು ೨೭-೩೬ ಎಕರೆಯ ವಿಶಾಲವಾದ ಪ್ರದೇಶದಲ್ಲಿ ಇರುತ್ತದೆ. ಈ ಪ್ರಾಂಗಣದಲ್ಲಿ ಜಾನುವಾರುಗಳನ್ನು ಹೊರತು ಪಡಿಸಿ ನಿಯಂತ್ರಣಕ್ಕೆ ಒಳಪಡಿಸಿದ ಎಲ್ಲಾ ಉತ್ಪನ್ನಗಳ ಮಾರಾಟವಾಗುತ್ತವೆ. ಅದರಲ್ಲಿ ಮುಖ್ಯವಾಗಿ ಬೆಲ್ಲ, ಹತ್ತಿ, ಅರಿಷಿಣ, ಗೋವಿನಜೋಳ, ಸದಕ ಮುಂತಾದ ಪ್ರಮುಖವಾದ ಉತ್ಪನ್ನಗಳಾಗಿವೆ. ಮತ್ತು ಇದಕ್ಕೆ ಹೊಂದಿಕೊಂಡಿರುವಂತೆ ೮.೧೯ ಎಕರೆಯ ಪ್ರದೇಶದಲ್ಲಿ ಜಾನುವಾರು ಮಾರುಕಟ್ಟೆಯ ಪ್ರಾಂಗಣವನ್ನು ಸುಸಜ್ಜಿತವಾಗಿ ಅಭಿವೃದ್ಧಿ ಪಡಿಸಲಾಗಿದೆ.

ಮುಧೋಳ ಮತ್ತು ಲೋಕಾಪುರದಲ್ಲಿ ಉಪ-ಮಾರುಕಟ್ಟೆಯ ಪ್ರಾಂಗಣಗಳಿವೆ. ಈ ಉಪ-ಮಾರುಕಟ್ಟೆಯಲ್ಲಿ ಗೋವಿನಜೋಳ, ಶೇಂಗಾ, ಜೋಳ, ಸಜ್ಜಿ, ಗೋದಿ, ಸೂರ್ಯಪಾನ, ಹತ್ತಿ (ಸಿಓ-೨), ಸದಕ, ಕಡಲೆ ಮತ್ತು ಹೈಬ್ರಿಡ್ ಜೋಳ ಮಾರಾಟವಾಗುತ್ತವೆ.

**೧೧) ಗ್ರಾಮೀಣ ಮಾರುಕಟ್ಟೆಗಳ ಅಭಿವೃದ್ಧಿ :** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಕ್ಷೇತ್ರದಲ್ಲಿ ಬರುವ ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿ ಪಡಿಸಲಾಗಿದೆ. ಈ ಮಾರುಕಟ್ಟೆಗಳಲ್ಲಿ ಕೃಷಿ ಉತ್ಪನ್ನಗಳ ಗುಣಮಟ್ಟಕ್ಕೆ ಅನುರೂಪವಾದ ಬೆಲೆ ಸಿಗುವಂತೆ ವರ್ಗೀಕರಣ, ಸಂಸ್ಕರಣ ಘಟಕಗಳ ಸ್ಥಾಪನೆ, ಸ್ಪರ್ಧಾತ್ಮಕ ಬೆಲೆ ಸಿಕ್ಕುವಂತೆ ಉತ್ತಮ ಮಾರಾಟ ಪದ್ಧತಿಯ ಅಳವಡಿಕೆ, ನಿಖರವಾದ ತೂಕ, ಮಾರಾಟದ ತಕ್ಷಣವೇ ಹಣ ಪಾವತಿ ಮುಂತಾದ ಸೌಕರ್ಯಗಳ ಜೊತೆಗೆ ದಾಸ್ತಾನು ಮಾಡುವದಕ್ಕಾಗಿ ಗೋದಾಮಿನ ವ್ಯವಸ್ಥೆ, ಅಡಮಾನು ಹಾಗೂ ಅಲ್ಪಾವಧಿ ಸಾಲದ ವ್ಯವಸ್ಥೆ, ಸಕಾಲದಲ್ಲಿ ಮಾರಾಟದ ಬಗ್ಗೆ ನಿರ್ಣಯ ಕೈಕೊಳ್ಳುವಂತೆ ಅನುವಾಗುವಂತೆ ಪೇಟೆ ಜ್ಞಾನ ಇತ್ಯಾದಿ ಸೌಲಭ್ಯ ಒದಗಿಸಲು ಆರ್.ಐ.ಡಿ.ಎಫ್. ಯೋಜನೆಯ ಅಧಿಯಲ್ಲಿ ಅಭಿವೃದ್ಧಿ ಪಡಿಸಲು ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಪ್ರಯತ್ನ ಮಾಡಿದೆ. ಅದರ ವಿವರ **ಕೋಷ್ಟಕ ೩.೮** ರಲ್ಲಿದೆ.

**ಕೋಷ್ಟಕ ೩.೮**

| ಕ್ರ.ಸಂ. | ಗ್ರಾಮದ ಹೆಸರು | ಆರ್ಥಿಕ ಪ್ರಗತಿ (ವೆಚ್ಚ) |
|---|---|---|
| ೧ | ಬೆಳಗಲಿ | ೧೪,೦೪,೬೭೫=೦೦ |
| ೨ | ಮಳಲಿ | ೧೩,೭೦,೫೦೦=೦೦ |
| ೩ | ಮಧಬಾವಿ | ೧೩,೯೩,೫೧೧=೦೦ |
| ೪ | ಮಂಟೂರ | ೧೩,೮೩,೯೭೪=೦೦ |
| ೫ | ವಜ್ಜರಮಟ್ಟಿ | ೧೩,೭೧,೭೪೭=೦೦ |
| ೬ | ಮೆಟಗುಡ್ಡ | ೧೩,೬೫,೫೮೩=೦೦ |
| ೭ | ಉತ್ತೂರ | ೧೩,೩೯,೬೩೭=೦೦ |
| ೮ | ಶಿರೋಳ | ೧೦,೭೭,೩೭೮=೦೦ |
| | ಒಟ್ಟು | ೧,೦೭,೦೭,೦೦೫=೦೦ |

(ಮಾಹಿತಿ :ಸಂಕ್ಷಿಪ್ತ ವರದಿ ೨೦೦೮)

**೩.೮ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಸೌಲಭ್ಯಗಳು :**

ಕೃಷಿ ಉತ್ಪನ್ನಗಳ ಮಾರಾಟದ ಕಾರ್ಯಗಳು ವ್ಯವಸ್ಥಿತವಾಗಿ ನಡೆಯುವಂತೆ ಮಾಡಲು ಹಲವಾರು ಪ್ರಯತ್ನಗಳು ನಡೆದಿವೆ. ಆರಂಭಿಕ ಹಂತದಲ್ಲಿ ಕೃಷಿ ಉತ್ಪನ್ನಗಳನ್ನು ನಿಯಂತ್ರಣಕ್ಕೊಳಪಡಿಸುವ ಕ್ರಮ ಒಂದೇ. ಈ ಉತ್ಪನ್ನಗಳ ಮಾರಾಟದಲ್ಲಿ ಅಡಕವಾಗಿರುವ ಎಲ್ಲ ಸಮಸ್ಯೆಗಳನ್ನು ಬಗೆಹರಿಸಲು 'ಸಿದ್ಧೌಷಧಿ' ಎಂದು ಪರಿಗಣಿಸಲಾಗಿತ್ತು. ವಿವಿಧ ಯೋಜನಾ ಅವಧಿಯಲ್ಲಿ ಕ್ರಮಪಡಿಸಿದ ಪೇಟೆಗಳ ವಿಸ್ತರಣೆ, ಹೆಚ್ಚು ಉತ್ಪನ್ನಗಳನ್ನು ನಿಯಂತ್ರಣಕ್ಕೆ ಒಳಪಡಿಸುವದು, ಆಡಳಿತದಲ್ಲಿ ಬಲವರ್ಧನೆ ಮತ್ತು ಸಂಗ್ರಹಣಾ ಸಾಮರ್ಥ್ಯ ಹೆಚ್ಚಿಸುವದಕ್ಕೆ ಆದ್ಯತೆ ಕೊಡಲಾಗಿತ್ತು. ಆದರೆ ಮಾರಾಟದ ವಿವಿಧ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಪ್ರಯತ್ನಗಳು ಅಷ್ಟೊಂದು ಇರಲಿಲ್ಲ.

ಒಂದು ಮಾರುಕಟ್ಟೆಯು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಲು, ಮಾರುಕಟ್ಟೆಯ ಪ್ರಾಂಗಣವು ಹರಾಜು ಕಟ್ಟೆಗಳು, ವಿಸ್ತಾರವಾದ ರಸ್ತೆ, ದಾಸ್ತಾನು ಮಳಿಗೆಗಳು, ಮುಂತಾದ ಸೌಲಭ್ಯಗಳಿರಬೇಕು. ಆ ಮಾರುಕಟ್ಟೆಯು ಹೆಚ್ಚು ಉತ್ಪನ್ನಗಳ ಆವಕವಾಗುವಂತೆ, ಮಾರಾಟದ ಮೌಲ್ಯ ವೃದ್ಧಿಯಾಗುವಂತೆ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಪೇಟೆಯ ಕಾರ್ಯಕರ್ತ ನಿರತರಾಗುವಂತೆ, ಸೌಲಭ್ಯಗಳು ಇರಬೇಕು. ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ಬರುವ ಗ್ರಾಮೀಣ ಮಾರುಕಟ್ಟೆಗಳ ಸಂಖ್ಯೆಯು ವೃದ್ಧಿಯಾದಾಗ ಮಾತ್ರ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನದ ಮೂಲ ಉದ್ದೇಶಗಳನ್ನು ಈಡೇರಿಸಲು ಸಾಧ್ಯವಾಗುತ್ತದೆ.

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಮಾರಾಟ ಅಭಿವೃದ್ಧಿಯ ಧೋರಣೆಗಳನ್ನು ಗಮನದಲ್ಲಿರಿಸಿಕೊಂಡು ಮಾರುಕಟ್ಟೆ ಕ್ಷೇತ್ರದಲ್ಲಿ ವಿವಿಧ ಸೌಲಭ್ಯಗಳನ್ನು ಅವಶ್ಯಕತೆಗೆ ಅನುಗುಣವಾಗಿ ಒದಗಿಸುತ್ತಾ ಬಂದಿದೆ. ಆ ಸೌಲಭ್ಯ ಮತ್ತು ವಿಶೇಷ ಸೌಕರ್ಯಗಳು ಇಂತಿವೆ.

**೧) ಮಾರುಕಟ್ಟೆಯ ಆವರಣ :** ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕೆ ಅನುಕೂಲವಾಗಲು, ಆ ಕಾರ್ಯಗಳು ಒಂದು ನಿರ್ದಿಷ್ಟ ಆವರಣದಲ್ಲಿ ನಡೆಯಬೇಕು. ಆವರಣವು ವಿಶಾಲವಾಗಿರಬೇಕು ಮತ್ತು ಹೊರವಲಯದ ಎತ್ತರ ಪ್ರದೇಶದಲ್ಲಿ ಇರಬೇಕು. ಅಂತೆಯೇ ಅದಕ್ಕೆ ಸುತ್ತಲು ಸುತ್ತುಗೋಡೆಯನ್ನು ನಿರ್ಮಿಸಬೇಕು. ಆವರಣದ ರಕ್ಷಣೆಗಾಗಿ ಮುಖ್ಯದ್ವಾರಗಳನ್ನು ನಿರ್ಮಿಸಿ ವಾಹನ, ಉತ್ಪನ್ನಗಳ ಸಾಗಾಣಿಕೆಯ ಮೇಲೆ ನಿಗಾವಹಿಸಲು ಅನುಕೂಲವಾಗುವಂತಹ ವಿಶಾಲವಾದ ೨೭-೩೬ ಎಕರೆಯ ಪ್ರದೇಶದಲ್ಲಿ ಮಾರುಕಟ್ಟೆ ಆವರಣವನ್ನು ಸ್ಥಾಪಿಸಲಾಗಿದೆ.

**೨) ಮಾರುಕಟ್ಟೆಯ ಪ್ರಾಂಗಣ :** ಮಾರುಕಟ್ಟೆಯ ಆವರಣದಲ್ಲಿ ಮಾರಾಟದ ವಿವಿಧ ಕಾರ್ಯಗಳು ಸುಗಮವಾಗಿ ನೆರವೇರುವದಕ್ಕಾಗಿ ವ್ಯವಸ್ಥಿತ ಪ್ರಾಂಗಣವನ್ನು ಸಮಿತಿಯು ಅಭಿವೃದ್ಧಿಪಡಿಸಿದೆ. ದಲ್ಲಾಲರಿಗೆ ಮತ್ತು ಖರೀದಿದಾರರಿಗೆ ಅನುಕೂಲವಾಗುವಂತೆ ಗೋದಾಮು ಸಹಿತ ಅಂಗಡಿಗಳ ನಿರ್ಮಾಣಕ್ಕಾಗಿ ವಿಶಾಲ ಸ್ಥಳಾವಕಾಶ ಇರುವ ಜಾಗವನ್ನು ಕೊಟ್ಟಿದೆ. ಇದರಿಂದ ರೈತರು ತಾವು ತಂದ ಉತ್ಪನ್ನಗಳನ್ನು ಮಾರಾಟಾಗುವವರೆಗೆ ಕಾಯ್ದಿರಿಸಲು ಮತ್ತು ಉತ್ತಮ ಬೆಲೆ ಪಡೆಯಲು ಸಾಧ್ಯ.

**೩) ಹರಾಜು ಕಟ್ಟೆಗಳು :** ಸಮಿತಿಯು ಗೋವಿನಜೋಳ, ಉಳ್ಳಾಗಡ್ಡಿ, ಸದಕ ಮುಂತಾದ ಆಹಾರ ಧಾನ್ಯಗಳನ್ನು ಮಾರಾಟ ಮಾಡಲು ಅನುಕೂಲವಾಗುವಂತೆ ೨ ಸೂರೆಯನ್ನು ಹೊಂದಿರುವ ಹಾಗೂ ಒಂದು ಸೂರೆ ಇರದ ಹರಾಜು ಕಟ್ಟೆಗಳನ್ನು ನಿರ್ಮಿಸಿದೆ. ಬೆಲ್ಲದ ಮಾರಾಟವು ಮುಕ್ತ ಹರಾಜಿನ ಮೂಲಕ ನಡೆಯುವದರಿಂದ ಅಡತಿ ಅಂಗಡಿಗಳಲ್ಲಿ ಕಟ್ಟೆಗಳನ್ನು ನಿರ್ಮಿಸುವಂತೆ ನಿರ್ದೇಶಿಸಿದೆ. ಹತ್ತಿಯ ಮಾರಾಟವು 'ಟೆಂಡರ್' ಪದ್ಧತಿಯ ಮೂಲಕ ನಡೆಯುವದರಿಂದ ಟೆಂಡರ್ ಕಟ್ಟೆಯನ್ನು ನಿರ್ಮಿಸಲಾಗಿದೆ. ಹೀಗೆ ರೈತರ ಹಾಗೂ ಪೇಟೆ ಕಾರ್ಯಕರ್ತರ ಅನುಕೂಲತೆಗಾಗಿ ಹರಾಜು ಕಟ್ಟೆಗಳನ್ನು ನಿರ್ಮಿಸಲಾಗಿದೆ.

**೪) ವಿಶಾಲವಾದ ರಸ್ತೆ :** ಸಮಿತಿಯು ಮಹಾಲಿಂಗಪುರದ ಕೃಷಿ ಉತ್ಪನ್ನ ಮಾರುಕಟ್ಟೆಯ ಮುಖ್ಯದ್ವಾರದಿಂದ ಪ್ರಾರಂಭವಾಗುವ ರಸ್ತೆಯನ್ನು ವಿಶಾಲವಾಗಿ ನಿರ್ಮಿಸಿ ಅದಕ್ಕೆ ಡಾಂಬರೀಕರಣ ಮಾಡಿಸಲಾಗಿದೆ. ಇದರ ಜೊತೆಗೆ ಒಳರಸ್ತೆಗಳನ್ನು ಸಹ ನಿರ್ಮಿಸಲಾಗಿದೆ. ಇದರಿಂದ ಉತ್ಪನ್ನಗಳನ್ನು ಮಾರಾಟ ಮಾಡಲು ವಾಹನಗಳಲ್ಲಿ ಹೇರಿಕೊಂಡು ಬರಲು ಹಾಗೂ ಮಾರಾಟದ ಉತ್ಪನ್ನಗಳನ್ನು ಸಾರಿಗೆ ವಾಹನಗಳಲ್ಲಿ ಹೇರಲು ಸುಲಭವಾಗುತ್ತದೆ. ರಸ್ತೆ ವಿಶಾಲವಾಗಿರುವದರಿಂದ ಎರಡು ಚಕ್ರದ ವಾಹನಗಳನ್ನು ಹಚ್ಚಲು 'ಪಾರ್ಕಿಂಗ್'ಗೆ ಅನುಕೂಲವಾಗುವದು. ಸಂಚಾರ ದಟ್ಟನೆಯ ಅವಘಡಗಳು ನಡೆಯದಂತೆ ರಸ್ತೆ ನಿರ್ಮಿಸಲಾಗಿದೆ. ಮುಖ್ಯರಸ್ತೆ, ೬೦ ಫೂಟ ಮತ್ತು ಒಳರಸ್ತೆಗಳು ೩೦ ಫೂಟಗಳದ್ದಾಗಿರುತ್ತವೆ.

**೫) ಒಳಚರಂಡಿ ವ್ಯವಸ್ಥೆ :** ಸಮಿತಿಯು ಮಾರುಕಟ್ಟೆಯ ಆವರಣದಲ್ಲಿ ಸ್ವಚ್ಛತೆ ಕಾಪಾಡಲು ಮತ್ತು ನೈರ್ಮಲ್ಯವನ್ನು ಕಾಪಾಡಲು ವ್ಯವಸ್ಥಿತ ಒಳಚರಂಡಿಗಳನ್ನು ನಿರ್ಮಿಸಲಾಗಿದೆ. ಇದು

ಆರೋಗ್ಯಕರ ವಾತಾವರಣವನ್ನು ನಿರ್ಮಿಸಲು ಸಹಾಯಕವಾಗಿದೆ.

**೬) ರೈತ ವಿಶ್ರಾಂತಿಗೃಹ :** ರೈತಭವನವನ್ನು ವಿಶ್ರಾಂತಿ ಪಡೆದುಕೊಳ್ಳಲು, ದೂರದ ಹಳ್ಳಿಯಿಂದ ಉತ್ಪನ್ನ ಮಾರಾಟ ಮಾಡಲು ಅಥವಾ ಮಾರಾಟಗೋಸ್ಕರ ಹರಾಜಿನ ಸಮಯದವರೆಗೆ ಕಾಯುವದಕ್ಕಾಗಿ ಮತ್ತೇ ತಂಗಲು ಅನುಕೂಲವಾಗುವಂತೆ ನಿರ್ಮಿಸಲಾಗಿದೆ. ಅನಾವಶ್ಯಕವಾಗಿ ವೆಚ್ಚದಾಯಕವಾದ ಲಾಡ್ಜನಲ್ಲಿರುವದನ್ನು ತಪ್ಪಿಸಲು ಈ ವ್ಯವಸ್ಥೆಯನ್ನು ಮಾಡಲಾಗಿದೆ.

**೭) ಶ್ರಮಿಕ ಭವನ :** ಹಮಾಲರು ಮತ್ತು ತೂಕದವರು ವಿಶ್ರಾಂತಿ ಪಡೆಯಲು ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಲು, ಸಭೆ ಸೇರಲು ಅನುಕೂಲವಾಗುವಂತೆ ವಿಶಾಲವಾದ ಸುಸಜ್ಜಿತ ಶ್ರಮಿಕ ಭವನವನ್ನು ಸಮಿತಿಯು ನಿರ್ಮಿಸಿದೆ.

**೮) ಕುಡಿಯುವ ನೀರಿನ ವ್ಯವಸ್ಥೆ :** ಪ್ರತಿ ಅಡತಿ ಅಂಗಡಿಯ ಮಾಲಿಕರು ತಮ್ಮ ಕಟ್ಟಡದ ಆವರಣದಲ್ಲಿ ಕೊಳವೆ ಬಾವಿ ನಿರ್ಮಿಸಿ ಕುಡಿಯಲು ಮತ್ತು ಬಳಸಲು ಯೋಗ್ಯವಾದ ನೀರಿನ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಇದರ ಜೊತೆಗೆ ಸಮಿತಿಯು ಬಾವಿಯನ್ನು ಆವರಣದಲ್ಲಿಯೇ ನಿರ್ಮಿಸುವದರ ಮೂಲಕ ಹಾಗೂ ಕೊಳವೆ ಬಾವಿಯನ್ನು ನಿರ್ಮಿಸಿ ಆವರಣದ ಸಾರ್ವಜನಿಕ ಸ್ಥಳದಲ್ಲಿ ಪೇಟೆಯ ಕಾರ್ಯಕರ್ತರಿಗೆ ಅನುಕೂಲವಾಗುವಂತೆ ಪೈಪ್‌ಲಾಯಿನ್‌ಕ್ಕೆ ನಳ ಅಳವಡಿಸುವದರ ಮೂಲಕ ಮತ್ತು ಟ್ಯಾಂಕ್ ಕಟ್ಟಿಸುವದರ ಮೂಲಕ ನೀರಿನ ವ್ಯವಸ್ಥೆ ಮಾಡಿಕೊಟ್ಟಿರುತ್ತದೆ.

**೯) ದಾರಿದೀಪ :** ಆವರಣದಲ್ಲಿ ನಿರ್ಮಿಸಿದ ರಸ್ತೆಯ ಬದಿಯಲ್ಲಿ ಮತ್ತು ಮುಖ್ಯದ್ವಾರಗಳ ಬದಿಯಲ್ಲಿ ಸಂಚಾರಕ್ಕೆ ಅನುಕೂಲ ಒದಗಿಸಲು ದಾರಿದೀಪದ ವ್ಯವಸ್ಥೆಯನ್ನು ಸಮಿತಿಯು ಮಾಡಿರುತ್ತದೆ.

**೧೦) ಉಪಹಾರ ಗೃಹ :** ಪೇಟೆಯಲ್ಲಿ ಕಾರ್ಯನಿರತರಾದ ಎಲ್ಲ ವರ್ಗದ ಜನರಿಗೆ ಊಟ ಮತ್ತು ಉಪಹಾರವನ್ನು ಯೋಗ್ಯದರದಲ್ಲಿ ಒದಗಿಸುವದಕ್ಕಾಗಿ ಉಪಹಾರ ಗೃಹ ನಿರ್ಮಿಸಲಾಗಿದೆ. ಆದರೆ ಆವರಣದ ಹೊರಗೆ ಇರುವ ಮತ್ತು ಆವರಣದ ಹೊರ ವಲಯಗಳಲ್ಲಿನ ಮಳಿಗೆಗಳಲ್ಲಿರುವ ಉಪಹಾರ ಗೃಹಗಳಿಂದಾಗಿ ಈ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿಸಲು ಸಮಿತಿಗೆ ಸಾಧ್ಯವಾಗಿರುವದಿಲ್ಲ.

**೧೧) ತಪಾಸಣಾ ಕೊಠಡಿ :** ಮಾರುಕಟ್ಟೆಯ ಆವರಣದ ಒಳಗೆ ಬರುವ ಖಾಸಗಿಯವರನ್ನು ಮತ್ತು ವಾಹನಗಳ ಮೇಲೆ ನಿಗಾ ಇಡಲು ಮತ್ತು ಉತ್ಪನ್ನಗಳು ಮಾರಾಟಾದ ನಂತರ ಸಾಗಾಣಿಕೆಗಾಗಿ ಸಾರಿಗೆಯ ವಾಹನದಲ್ಲಿ ಭರ್ತಿ ಮಾಡಿಕೊಂಡ ವಾಹನಗಳನ್ನು ಪರಿಶೀಲಿಸುವದಕ್ಕಾಗಿ ದ್ವಾರಗಳ ಬಳಿಯಲ್ಲಿ ತಪಾಸಣಾ ಕೊಠಡಿಯನ್ನು ನಿರ್ಮಿಸಲಾಗಿದೆ. ಆದರೆ ದುರ್ದೈವವಶಾತ್ ಈ ಕೊಠಡಿಯಲ್ಲಿ ಯಾವುದೇ ತಪಾಸಣಾ ಗುಮಾಸ್ತ ಮತ್ತು ಅಧಿಕಾರಿಗಳು ಇರುವದಿಲ್ಲ.

**೧೨) ಗೋದಾಮುಗಳ ವ್ಯವಸ್ಥೆ :** ಮಾರುಕಟ್ಟೆ ಸಮಿತಿಯು ರೈತರು ಮಾರಾಟ ಮಾಡಲು ತಂದ ಆದರೆ ಬೆಲೆಯಲ್ಲಿ ಇಳಿಕೆಯ ಕಾರಣದಿಂದ ಮಾರಾಟಾಗದೇ ಇರುವ ಉತ್ಪನ್ನಗಳನ್ನು ಅವುಗಳ ಗಾತ್ರ, ಗುಣಮಟ್ಟ ಮತ್ತು ರೂಪ ಕೆಡದಂತೆ ಕಾಯ್ದಿಡಲು ಯೋಗ್ಯವಾದ ಉಗ್ರಾಣದ ವ್ಯವಸ್ಥೆಯನ್ನು ಮಾಡಲಾಗಿದೆ. ವಿವಿಧ ಯೋಜನೆಗಳ ಅಡಿಯಲ್ಲಿ ಮಹಾಲಿಂಗಪುರದ ಮಾರುಕಟ್ಟೆ ಆವರಣದಲ್ಲಿ ಒಟ್ಟು ೪ ಉಗ್ರಾಣಗಳನ್ನು (೨೦೦ ಮೆಟ್ರಿಕ್ ಟನ್ ಸಾಮರ್ಥ್ಯದ) ನಿರ್ಮಿಸಿದೆ. ಅದರಂತೆ ಮುಧೋಳದಲ್ಲಿ ೨, ಹಾಗೂ ಲೋಕಾಪುರದಲ್ಲಿ ೨ ಉಗ್ರಾಣಗಳ ನಿರ್ಮಾಣ ಮಾಡಿದೆ. ರೈತರು ತಾವು ಈ ಉಗ್ರಾಣಗಳಲ್ಲಿಟ್ಟ ಮಾರಲು ಅರ್ಹವಾದ ನಿಯಂತ್ರಿತ ಉತ್ಪನ್ನಗಳನ್ನು ಬೇಡಿಕೆ ನಿರ್ಮಾಣವಾದ ನಂತರ, ಬೆಲೆ ಚೇತರಿಕೆಯಾದ ನಂತರ ಅವುಗಳನ್ನು ಮಾರಾಟ ಮಾಡುವದಕ್ಕಾಗಿ ಪಡೆಯುತ್ತಾರೆ.

**೧೩) ಒಣಗಿಸುವ ಕಟ್ಟೆ :** ಮಾರುಕಟ್ಟೆ ಸಮಿತಿ ರೈತರು ಒಣಗಿಸುವದಕ್ಕಾಗಿ ತಂದ ಉತ್ಪನ್ನಗಳನ್ನು ಮಾರಾಟ ಯೋಗ್ಯ ಉತ್ಪನ್ನಾಗಿಸಲು ಮತ್ತು ಒಣಗಿಸಲು ಅನುಕೂಲವಾಗುವಂತೆ ಆವರಣದಲ್ಲಿ ಒಣಗಿಸುವ ಕಟ್ಟೆಯನ್ನು ನಿರ್ಮಿಸಿರುತ್ತದೆ. ಹೊರಾಂಗಣದ ಅಥವಾ ಸೂರು ಹೊಂದಿದ ಕಟ್ಟೆಗಳನ್ನು ಈ ಉದ್ದೇಶಕ್ಕಾಗಿ ಉಪಯೋಗಿಸಲು ಅವಕಾಶವಿದೆ.

**೧೪)** ಉತ್ಪನ್ನಗಳನ್ನು ಇಳಿಸಲು ಮತ್ತು ಹೇರಲು ಅನುಕೂಲವಾಗುವಂತೆ ಜಗುಲಿಯನ್ನು ನಿರ್ಮಿಸಲಾಗಿದೆ.

**೧೫) ಅಡಮಾನು ಸಾಲ :** ರೈತರ ಉತ್ಪನ್ನವನ್ನು ಆಧಾರಪಡಿಸಿಕೊಂಡು ಕಡಿಮೆ (ಯೋಗ್ಯ) ಬಡ್ಡಿದರದಲ್ಲಿ ಸಾಲದ ಸೌಲಭ್ಯ ಒದಗಿಸುವದು.

**೧೬) ದೂರವಾಣಿ ಕೇಂದ್ರ :** ಮಾರುಕಟ್ಟೆಯ ಸಮಾಚಾರದ ವ್ಯವಸ್ಥೆಗೆ ಅನುಕೂಲಕ್ಕಾಗಿ ಆವರಣದಲ್ಲಿಯೇ ಸುಸಜ್ಜಿತವಾದ ದೂರವಾಣಿ ಕೇಂದ್ರವನ್ನು ನಿರ್ಮಿಸಲು ಅವಕಾಶ ಒದಗಿಸಲಾಗಿದೆ. ಆವರಣದಲ್ಲಿ ಭಾರತೀಯ ಸಂಚಾರಿ ನಿಗಮದ ಕೇಂದ್ರವು ಎಲ್ಲ ಪೇಟೆಕಾರ್ಯಕರ್ತರಿಗೆ ಮತ್ತು ಸಮಿತಿ ಸಿಬ್ಬಂದಿಗೆ ಅನುಕೂಲವಾಗುವದಕ್ಕಾಗಿ ಕಾರ್ಯನಿರತವಾಗಿದೆ. (ಇದಕ್ಕೆ ೧೦೦ ಮೀಟರ್ X ೧೦೦ ಮೀಟರ್ ವಿಸ್ತೀರ್ಣದ ಜಾಗೆ ಒದಗಿಸಲಾಗಿದೆ.)

**೧೭)** ಗಣಕೀಕೃತ ಪೇಟೆಧಾರಣೆ ಫಲಕದ ವ್ಯವಸ್ಥೆಯನ್ನು ಈ ಮಾರುಕಟ್ಟೆ ಹೊಂದಿದೆ.

**೧೮)** ಈ ಮಾರುಕಟ್ಟೆಯ ಆವರಣದಲ್ಲಿ ಪ್ರಧಾನ ಅಂಚೆ ಕಛೇರಿ ೪೦′ X ೨೫′ ಸ್ಥಳಾವಕಾಶದಲ್ಲಿ ಇದೆ.

**೧೯) ಜಾನುವಾರು ಮಾರುಕಟ್ಟೆ :** ಸಮಿತಿಯು ೨೦೦೨-೦೩ ರಿಂದ ಜಾನುವಾರುಗಳ ಮಾರಾಟಕ್ಕೆ ಅನುಕೂಲವಾಗುವಂತೆ ನಿರ್ಮಿಸಲಾಗಿದೆ. ಈ ಮಾರುಕಟ್ಟೆಯನ್ನು ಮುಖ್ಯ ಮಾರುಕಟ್ಟೆಯ ಪಕ್ಕದಲ್ಲಿ ೦೭.೨೪ ಎಕರೆ ಸ್ಥಳದಲ್ಲಿದೆ. ಇದರಲ್ಲಿ ಜಾನುವಾರುಗಳನ್ನು ಕಟ್ಟಲು, ಅವುಗಳಿಗೆ ಕುಡಿಯಲು ನೀರು, ಮೇವು ಇಡಲು ಸ್ಥಳ ಮತ್ತು ಜಾನುವಾರಗಳಿಗೆ ಚಿಕಿತ್ಸೆ ಒದಗಿಸುವ ವ್ಯವಸ್ಥೆ ಹೊಂದಿದ ಆವರಣವನ್ನು ನಿರ್ಮಿಸಲಾಗಿದೆ.

೨೦) ಕನಿಷ್ಠ ಬೆಲೆ ಯೋಜನೆ, ಬೆಳೆ ವಿಮೆಯೋಜನೆ, ರೈತ ಸಂಜೀವಿನಿ ಯೋಜನೆ, ತೂಕದವರ ಮತ್ತು ಹಮಾಲರ ಜೀವವಿಮಾ ಯೋಜನೆ, ಹಮಾಲರ ವಸತಿಯೋಜನೆಗಳ ಸೌಲಭ್ಯ ಈ ಮಾರುಕಟ್ಟೆಯಲ್ಲಿದೆ.

೨೧) ಸಮಿತಿಯ ಸಿಬ್ಬಂದಿಯ ನಿವಾಸದ ೬ ಕೊಠಡಿಗಳು, ಅತಿಥಿಗೃಹ, ಗಣೇಶ ಮಂದಿರ, ದಲಾಲರ ವರ್ತಕರ ಸಂಘದ ಕೊಠಡಿ, ಸಣ್ಣ ಮಳಿಗೆಗಳು-೫ ನಿರ್ಮಿಸಲಾಗಿದೆ.

೨೨) ಮಾರುಕಟ್ಟೆಯ ಸಮಾಚಾರದ ವ್ಯವಸ್ಥೆಯನ್ನು ಹೊಂದಿದೆ.

೨೩) ದಕ್ಷ, ನುರಿತ ಮತ್ತು ಅನುಭವಿ ಸಿಬ್ಬಂದಿಗಳ ವ್ಯವಸ್ಥೆ ಇದೆ.

೨೪) ಪರಿಸರದ ಸಂರಕ್ಷಣಾ ಮತ್ತು ಅಭಿವೃದ್ಧಿಯ ಕಾರ್ಯವನ್ನು ಸಮಿತಿಯು ವಿವಿಧ ತೆರನಾದ ಗಿಡಗಳನ್ನು ಬೆಳೆಸುವದರ ಮೂಲ ಈ ಪ್ರಜ್ಞೆಯನ್ನು ಮೆರೆದಿದೆ.

೨೫) ಸಮಿತಿಯ ಕಾರ್ಯಾಲಯದ ಸಿಬ್ಬಂದಿಗೆ ಆವರಣದಲ್ಲಿಯೇ ನೆಲೆಸುವಂತಾಗಲು ೬ ಸಿಬ್ಬಂದಿ ವಾಸಿಸುವ ಮನೆಗಳನ್ನು, ಹಮಾಲರಿಗೆ ಜಾನುವಾರುಗಳ ಮಾರುಕಟ್ಟೆ ಪಕ್ಕದಲ್ಲಿ ೫೧ ನಿವಾಸಗಳನ್ನು ವಿವಿಧ ಯೋಜನೆಗಳ ಅಡಿಯಲ್ಲಿ ನಿರ್ಮಿಸಲಾಗಿದೆ.

೨೬) **'ಕ್ಲಿಯರಿಂಗ್ ಹೌಸ್'** : ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ನಿಯಂತ್ರಣಕ್ಕೊಳಪಡಿಸಿದ ಉತ್ಪನ್ನಗಳನ್ನು ವ್ಯವಹರಿಸುತ್ತಿರುವ ಖರೀದಿದಾರರು, ದಲ್ಲಾಲರಿಗೆ ತ್ವರಿತವಾಗಿ ಹಣ ಸಂದಾಯ ಮಾಡುವಗೋಸ್ಕರ ದಲಾಲ ವರ್ತಕರ ಸಂಘದ ಸಹಯೋಗದೊಂದಿಗೆ ೧೯೮೯ ರಿಂದ ಈ ಪದ್ಧತಿಯನ್ನು ಜಾರಿಯಲ್ಲಿ ತಂದಿದೆ. ಈ ಪದ್ಧತಿಗೆ ಅನುಗುಣವಾಗಿ ಖರೀದಿದಾರರು ಬೆಲ್ಲ ಖರೀದಿಸಿದ ೨೫ ದಿನದೊಳಗೆ, ಹತ್ತಿ ಮತ್ತು ಅರಿಷಿಣ ಖರೀದಿಸಿದರೆ ೩೫ ದಿನಗಳ ಒಳಗೆ ಹಣ ಸಂದಾಯದ ಅವಧಿ ನಿರ್ಧರಿಸಲಾಗಿದೆ. ನಿರ್ದಿಷ್ಟ ದಿನಾಂಕದೊಳಗೆ ಚೆಕ್‌ಗಳನ್ನು ಇಲ್ಲಿ ಸಲ್ಲಿಸಬೇಕು. ತಪ್ಪಿದಲ್ಲಿ ಖರೀದಿ ವ್ಯವಹಾರವನ್ನು ರದ್ದುಗೊಳಿಸಲಾಗುವದು.

೨೭) ಗ್ರಾಮೀಣ ಸಂಪರ್ಕ ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆ.

**೩.೯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ, ಕಚೇರಿಯ ಮಾನವ ಸಂಪನ್ಮೂಲ :**

ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ನಿಯಂತ್ರಣದ ಅಧಿಕಾರ ಹೊಂದಿರುವ ಸಮಿತಿಗೆ ಸಲಹೆ-ಸೂಚನೆಗಳನ್ನು ನೀಡಲು ಮತ್ತು ಕಾನೂನಿನ ವಿಧಿನಿಯಮಾವಳಿಗಳನ್ನು ಯಥಾವತ್ತಾಗಿ ಅನುಸರಣೆಯಲ್ಲಿ ತರಲು ಅನುಕೂಲವಾಗುವಂತೆ ಕಚೇರಿಯ ಸಿಬ್ಬಂದಿ ಇರುತ್ತಾರೆ. ಅವರನ್ನು ರಾಜ್ಯ ಸರ್ಕಾರ ಅಥವಾ ಈ ಬಗ್ಗೆ ಸರ್ಕಾರದಿಂದ ಆದೇಶ ಪಡೆದ ಪ್ರಾಧಿಕಾರ ಅಥವಾ ಅಧಿಕಾರಿಯಿಂದ ನೇಮಕ ಮಾಡಲಾಗುತ್ತದೆ.

ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ರಾಜ್ಯ ಸರ್ಕಾರದಿಂದ ನೇಮಿಸಲ್ಪಟ್ಟ ಅಥವಾ ಈ ಬಗ್ಗೆ ಅಧಿಕಾರ ಪಡೆದ ಪ್ರಾಧಿಕಾರ ಅಥವಾ ಅಧಕಾರಿಯಿಂದ ನೇಮಿಸಲ್ಪಟ್ಟ ಒಬ್ಬ ಸರ್ಕಾರಿ ನೌಕರನನ್ನು ಅವರ ಕಾರ್ಯದರ್ಶಿಯಾಗಿ ಅಥವಾ ಸಹಾಯಕ ಕಾರ್ಯದರ್ಶಿಯಾಗಿ ಅಥವಾ ಕೃಷಿ ಮಾರಾಟ ನಿರ್ದೇಶಕರು ಗೊತ್ತುಪಡಿಸಿದ ಸಂಖ್ಯೆಯಷ್ಟು ನೌಕರರನ್ನು ಸಹಾಯಕ

ಕಾರ್ಯದರ್ಶಿಗಳಾಗಿ ಹೊಂದಲು ಅವಕಾಶವಿದೆ. ಅದರಂತೆ ಈ ಮಾರುಕಟ್ಟೆಯ ಕ್ಷೇತ್ರದ ಆಡಳಿತ ಪೂರಕವಾಗುವಂತೆ ಒಬ್ಬ ಕಾರ್ಯದರ್ಶಿಯನ್ನು ಹಾಗೂ ಮೂವರು ಸಹಾಯಕ ಕಾರ್ಯದರ್ಶಿಗಳನ್ನು ನೇಮಿಸಲಾಗಿದೆ. ಅಧ್ಯಯನದ ಆರಂಭದ ವರ್ಷ ೨೦೦೦-೨೦೦೧ ರಲ್ಲಿಯ ಸಿಬ್ಬಂದಿ ಸಂಖ್ಯೆ ೨೪, ಪ್ರಥಮ ದರ್ಜೆ ಸಹಾಯಕನ ಹುದ್ದೆ ಖಾಲಿ ಇದೆ. ಆದರೆ ೨೦೦೭-೦೮ ರಲ್ಲಿ ಸಿಬ್ಬಂದಿಯ ಸಂಖ್ಯೆ ೨೧ ಇದ್ದರು ಖಾಲಿ ಇರುವ ಹುದ್ದೆಗಳು ೦೯ ಇರುತ್ತದೆ. ಸಧ್ಯದಲ್ಲಿ ಕೇವಲ ೧೧ ಜನ ಸಿಬ್ಬಂದಿಯಿಂದ ಮಾತ್ರ ಈ ಕಾರ್ಯಾಲಯ ಕಾರ್ಯನಿರ್ವಹಿಸುತ್ತಿದೆ. ೨೦೦೭-೦೮ ರಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಯಾಲಯದ ಸಿಬ್ಬಂದಿ ಮತ್ತು ಅಧಿಕಾರಿಗಳ ವಿವರವು ಈ ಕೆಳಗಿನ **ಕೋಷ್ಟಕ ೩.೯** ರಲ್ಲಿದೆ.

| ಅ.ಸಂ. | ಹೆಸರು | ಹುದ್ದೆ |
|---|---|---|
| ೧ | ಶ್ರೀ ಸಿ. ಎಚ್. ಮೋಹನ | ಕಾರ್ಯದರ್ಶಿ |
| ೨ | ಶ್ರೀ ಎಮ್. ಎ. ಪೀರಜಾದೆ | ಸಹಾಯಕ ಕಾರ್ಯದರ್ಶಿ |
| ೩ | ಶ್ರೀ ಸಿ. ಎನ್. ಆಲೂರ | ಸಹಾಯಕ ಕಾರ್ಯದರ್ಶಿ |
| ೪ | ಶ್ರೀ ಬಿ. ಎಂ. ಮೋಟಗಿ | ಸಹಾಯಕ ಕಾರ್ಯದರ್ಶಿ |
| ೫ | ಖಾಲಿ ಸ್ಥಾನ | ಆಂತರಿಕ ಲೆಕ್ಕ ಪರಿಶೋಧಕ |
| ೬ | ಖಾಲಿ ಸ್ಥಾನ | ಲೆಕ್ಕಿಗಳು |
| ೭ | ಖಾಲಿ ಸ್ಥಾನ | ಮಾರುಕಟ್ಟೆ ಮೇಲ್ವಿಚಾರಕರು |
| ೮ | ಖಾಲಿ ಸ್ಥಾನ | ಮಾರುಕಟ್ಟೆ ಮೇಲ್ವಿಚಾರಕರು |
| ೯ | ಖಾಲಿ ಸ್ಥಾನ | ಮಾರುಕಟ್ಟೆ ಮೇಲ್ವಿಚಾರಕರು |
| ೧೦ | ಖಾಲಿ ಸ್ಥಾನ | ಪ್ರಥಮದರ್ಜೆ ಸಹಾಯಕರು |
| ೧೧ | ಕುಮಾರಿ ಬಿ.ಎಂ. ಮಾಳಿ | ದ್ವಿತೀಯದರ್ಜೆ ಸಹಾಯಕರು |
| ೧೨ | ಶ್ರೀ ಆರ್. ಎಚ್. ರಾಠೋಡ | ಮಾರಾಟ ಸಹಾಯಕರು |
| ೧೩ | ಶ್ರೀ ಬಿ. ಪಿ. ಬಾಡಗಿ | ಮಾರಾಟ ಸಹಾಯಕರು |
| ೧೪ | ಶ್ರೀ ಬಿ. ಬಿ. ಸಾಳುಂಕೆ | ಮಾರಾಟ ಸಹಾಯಕರು |
| ೧೫ | ಶ್ರೀ ಎಂ. ಆರ್. ಮುಚ್ಚಂಡಿ | ಮಾರಾಟ ಸಹಾಯಕರು |
| ೧೬ | ಶ್ರೀಮತಿ ಎಸ್. ಎಚ್. ದೇವಾಂಗಮಠ | ಬೆರಳಚ್ಚುಗಾರ್ತಿ |
| ೧೭ | ಖಾಲಿ ಸ್ಥಾನ | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-೪ |
| ೧೮ | ಖಾಲಿ ಸ್ಥಾನ | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-೪ |
| ೧೯ | ಶ್ರೀ ಕೆ. ಬಿ. ಹಣಬರ | ವಾಹನ ಚಾಲಕರು |
| ೨೦ | ಶ್ರೀ ಸಿ. ಎ. ಬಿಂಜಲಭಾವಿ | ಸಿಪಾಯಿ |
| ೨೧ | ಖಾಲಿ ಸ್ಥಾನ | ಸಿಪಾಯಿ |

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ, ಸಂಘಟನೆಯ ರಚನೆ.**




ಕಾರ್ಯಾಲಯದ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಸಮಿತಿಗೆ ಆಪ್ತ ಸಲಹೆ - ಸೂಚನೆಗಳನ್ನು ನೀಡುತ್ತಾರೆ. ಇವರ ಪಾಂಡಿತ್ಯ, ಅನುಭವ, ಕಾರ್ಯದಕ್ಷತೆಯ ಲಾಭದಿಂದಾಗಿ ಮಾರುಕಟ್ಟೆಯು ಮಹತರವಾದ ಪ್ರಗತಿ ಸಾಧಿಸುತ್ತಿದೆ. ಎಲ್ಲ ಸಿಬ್ಬಂದಿ ಮತ್ತು ಅಧಿಕಾರಿಗಳು ತಮ್ಮ ಕಾರ್ಯಗಳಲ್ಲಿ ಪ್ರಾವೀಣ್ಯತೆ ಹೊಂದಿದ್ದಾರೆ. ಆದರೆ ಸದರಿ ಖಾಲಿ ಇರುವ ಹುದ್ದೆಗಳು ಕಾರ್ಯಾಲಯದ ಕಾರ್ಯವೈಖರಿಯ ಮೇಲೆ ಪರಿಣಾಮ ಬೀರುವ ಸಾಧ್ಯತೆ ಹೆಚ್ಚು. ಖಾಲಿ ಸ್ಥಾನಗಳಿಗೆ ಯೋಗ್ಯ ಅಭ್ಯರ್ಥಿಯ ನೇಮಕಾತಿಯಿಂದ ದಕ್ಷತೆಯನ್ನು ಹೆಚ್ಚಿಸಲು ಸಾಧ್ಯ.

**೩.೧೦ ಅಭಿವೃದ್ಧಿ ಕಾರ್ಯಗಳು :**

ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಸಮಿತಿಯು ಎಲ್ಲ ಸೌಲಭ್ಯಗಳನ್ನು ಒದಗಿಸುವದಕ್ಕಾಗಿ, ಅಧ್ಯಯನದ ಅವಧಿಯಲ್ಲಿ ಕೈಕೊಂಡ ವಿವಿಧ ಅಭಿವೃದ್ಧಿ ಕಾಮಗಾರಿಗಳ ವಿವರ ಇಂತಿದೆ :

೧) ದಲಾಲರಿಗೆ ಮತ್ತು ಖರೀದಿದಾರರಿಗೆ ತಮ್ಮ ವ್ಯವಹಾರವನ್ನು ನಡೆಸಲು ಅನುಕೂಲತೆ ಒದಗಿಸುವದಕ್ಕಾಗಿ ಅಂಗಡಿಗಳನ್ನು ಕಟ್ಟಿಸಲು ೬೦' X ೧೫೦' ವಿಶಾಲವಾದ ಖಾಲಿ ಜಾಗೆಯನ್ನು ಕೊಟ್ಟಿದೆ.

೨) ಸಮಿತಿಯು ದಲಾಲ ವರ್ತಕರ ಸಂಘದ ಸಹಾಯದೊಂದಿಗೆ ಆವರಣದಲ್ಲಿ ಗಣಪತಿ ದೇವಸ್ಥಾನ ನಿರ್ಮಿಸಿದೆ. (ರೂಪಾಯಿ ೮.೫೦ ಸಾವಿರ ವೆಚ್ಚದಲ್ಲಿ ನಿರ್ಮಿಸಲಾಗಿದೆ.)

೩) ಅಂಚೆ ಕಚೇರಿ, ದೂರವಾಣಿ ಕೇಂದ್ರಗಳನ್ನು ಕಟ್ಟಲು ವಿಶಾಲವಾದ ಜಾಗೆ ಕೊಟ್ಟಿದೆ. ಅಂಚೆ ಕಚೇರಿಯನ್ನು ನಿರ್ಮಿಸಿದೆ.

೪) ರೈತ ಭವನ, ಶ್ರಮಿಕ ಭವನ, ಉಪಹಾರ ಗೃಹ, ಟೆಂಡರ್ ಹಾಲ್, ಚಿಕ್ಕ ಮಳಿಗೆಗಳು ಹಾಗೂ ವಿಶ್ರಾಂತಿ ಗೃಹಗಳ ನಿರ್ಮಾಣ ಮತ್ತು ನಿರ್ವಹಣೆಯನ್ನು ಮಾಡುತ್ತಿದೆ.

೫) ವಿವಿಧ ಯೋಜನೆಗಳ ಅಡಿಯಲ್ಲಿ ಗೋದಾಮುಗಳನ್ನು ನಿರ್ಮಿಸಿದೆ ಮತ್ತು ಗ್ರಾಮೀಣ ಸಂತೆ ಅಭಿವೃದ್ಧಿ ಪಡಿಸಲಾಗಿದೆ.

೬) ತೂಕದವರಿಗೆ ಮತ್ತು ಹಮಾಲರಿಗೆ ಜನಶ್ರೀ ವಿಮಾ ಯೋಜನೆ ಅಡಿಯಲ್ಲಿ ೧೭ ಜನ ತೂಕದವರಿಗೆ ಹಾಗೂ ೧೧೯ ಜನ ಹಮಾಲರಿಗೆ ವಿಮಾ ಸೌಲಭ್ಯ ಒದಗಿಸಿದೆ. ಈ ಯೋಜನೆ ಅಡಿಯಲ್ಲಿ ಜೂನ್ ೨೦೦೮ ರವರೆಗೆ ಅಪಘಾತದಲ್ಲಿ ಮೃತರಾದ ೬ ಜನ ಹಮಾಲರಿಗೆ ಮತ್ತು ಇಬ್ಬರು ತೂಕದವರಿಗೆ ರೂ. ೨,೦೦,೦೦೦/- ವಿಮಾ ಹಣವನ್ನು ವಿತರಿಸಿದೆ.

೭) ರೈತ ಸಂಜೀವಿನಿ ಅಡಿಯಲ್ಲಿ ಮಾರುಕಟ್ಟೆ ಕ್ಷೇತ್ರದಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ರೈತರು, ಕೃಷಿ ಮತ್ತು ಹುಟ್ಟುವಳಿ ಮಾರಾಟ ಕಾರ್ಯದಲ್ಲಿ ತೊಡಗಿರುವಾಗ ಅಪಘಾತದಲ್ಲಿ ಸಾವಿಗೀಡಾದ ಅಥವಾ ಅಂಗವಿಕಲತೆ ಉಂಟಾದಲ್ಲಿ ಆರ್ಥಿಕ ಸಹಾಯ ಹಾಗೂ ಸಾಮಾಜಿಕ ಭದ್ರತೆ ಒದಗಿಸಲು ದಿನಾಂಕ : ೦೧-೦೪-೧೯೯೬ ರಿಂದ ಜಾರಿಯಲ್ಲಿ ತಂದಿದ್ದು ೨೩ ಜನ ರೈತರಿಗೆ ಒಟ್ಟು ರೂ. ೩,೭೭,೫೦೦ ಆರ್ಥಿಕ ಪರಿಹಾರವನ್ನು ಜೂನ್ ೨೦೦೮ ರ ವರೆಗೆ ವಿತರಿಸಿದೆ.

೮) ಅಡಮಾನ ಸಾಲದ ಯೋಜನೆ : ಈ ಯೋಜನೆ ಅಡಿಯಲ್ಲಿ ರೈತರ ಉತ್ಪನ್ನಗಳನ್ನು ಅಡವು ಇಟ್ಟುಕೊಂಡು ಸಾಲ ಪಾವತಿಸಲಾಗಿದೆ. ಬಡ್ಡಿದರವು ಅವರು ಪಡೆಯುವ ಸಾಲದ ಮೊತ್ತದ ಮೇಲೆ ಅವಲಂಬಿಸಿದೆ. ೯೦ ದಿನಗಳ ವರೆಗಿನ ಸಾಲಕ್ಕೆ ಬಡ್ಡಿ ಇಲ್ಲ. ೧೮೦ ದಿನಗಳವರೆಗಿನ ೨೫,೦೦೦/- ರೂ. ಸಾಲಕ್ಕೆ ಶೇ. ೪, ೨೫,೦೦೦ - ೫೦,೦೦೦ ರೂ. ಸಾಲಕ್ಕೆ ಶೇ. ೬, ೫೦,೦೦೦ ದಿಂದ ೧,೦೦,೦೦೦ ಸಾಲಕ್ಕೆ ಶೇ. ೮ ಮತ್ತು ಒಂದು ಲಕ್ಷದಿಂದ ೨ ಲಕ್ಷದ ಸಾಲಕ್ಕೆ ಶೇ. ೧೦ ಬಡ್ಡಿದರ ಇರುತ್ತದೆ. ೨೦೦೦-೨೦೦೧ ರಿಂದ ೩೬ ಜನ ರೈತರು ಒಟ್ಟು ೭,೯೦,೮೦೦ ರೂಪಾಯಿ ಅಡಮಾನು ಸಾಲದ ಪ್ರಯೋಜನೆ ಪಡೆದಿದ್ದಾರೆ.

೯) ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದಲ್ಲಿ ೨೦೦೧-೦೨ ನೇ ಸಾಲಿನಲ್ಲಿ ಸಮಿತಿಯು ಕ್ರಿಯಾ ಯೋಜನೆಯ ಅಡಿಯಲ್ಲಿ ಸಂಪರ್ಕ ರಸ್ತೆ ನಿರ್ಮಾಣ, ಗೋದಾಮು, ಹರಾಜುಕಟ್ಟೆ, ಅತಿಥಿಗೃಹ, ನೀರಿಗಾಗಿ ಪೈಪ್‌ಲೈನ್ ಮಾಡಿಸುವ ವಿದ್ಯುತ್ ಪೂರೈಸುವ ಮುಂತಾದ ಮಂಜೂರಾದ ೧೩ ಕಾಮಗಾರಿಗಳಿಗೆ ೪೪,೬೮,೧೪೪ ರೂಪಾಯಿಯ ಅಭಿವೃದ್ಧಿ ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದಾರೆ.

೨೦೦೨-೦೩ ರಲ್ಲಿ ವಾರ್ಷಿಕ ಕ್ರಿಯಾಯೋಜನೆ ಅಡಿಯಲ್ಲಿ ೧೦ ಕಾಮಗಾರಿಗಳಿಗೆ ೨೦.೭೬ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ.

೨೦೦೪-೦೫ ನೇ ಸಾಲಿನಲ್ಲಿ ೧೭ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಒಟ್ಟು ರೂಪಾಯಿ ೪೨.೪೮ ಲಕ್ಷಗಳನ್ನು ವ್ಯಯಿಸಿ ಮಹಾಲಿಂಗಪುರ, ಮುಧೋಳ ಮತ್ತು ಲೋಕಾಪುರದ ಮಾರುಕಟ್ಟೆ ಪ್ರಾಂಗಣಗಳನ್ನು ಅಭಿವೃದ್ಧಿಪಡಿಸಲಾಗಿದೆ.

೨೦೦೭-೦೮ ರಲ್ಲಿ ಮಹಾಲಿಂಗಪುರ ಮುಖ್ಯ ಮಾರುಕಟ್ಟೆ ಪ್ರಾಂಗಣದಲ್ಲಿ ೧೪ ಕಾಮಗಾರಿಗಳಲ್ಲಿ ೪ ಕಾಮಗಾರಿಗಳನ್ನು ವಿವಿಧ ಕಾರಣಗಳಿಂದ ಕೈಬಿಟ್ಟು ೧೦ ಕಾಮಗಾರಿಗಳಲ್ಲಿ ಟೆಂಡರ್ ಕರೆಯಬೇಕಾದ ಕಾಮಗಾರಿಗಳು-೩, ಕೆಲಸ ಪ್ರಗತಿಯಲ್ಲಿರುವ ಕಾಮಗಾರಿಗಳು-೪, ಮುಕ್ತಾಯಗೊಂಡ ಕಾಮಗಾರಿಗಳು-೧, ಇವುಗಳಿಗಾಗಿ ಜೂನ್ ೨೦೦೮ ರವರೆಗೆ ೧,೯೮,೭೫೩ ರೂ. ವೆಚ್ಚ ಮಾಡಲಾಗಿದೆ. ಜಾನುವಾರ ಮಾರುಕಟ್ಟೆಯಲ್ಲಿ ೩.೫೩,೨೦೯ ರೂಗಳ ವೆಚ್ಚದಲ್ಲಿ ಅಭಿವೃದ್ಧಿ ಪಡಿಸಲಾಗಿದೆ.

ಮುಧೋಳ ಉಪಮಾರುಕಟ್ಟೆ ಪ್ರಾಂಗಣದಲ್ಲಿ ೯ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಅದಕ್ಕಾಗಿ ೧೨.೯೯ ಲಕ್ಷ ರೂಪಾಯಿ ವೆಚ್ಚ ಮಾಡಿ ೩ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ ಮತ್ತು ೬ ಕಾಮಗಾರಿಗಳಲ್ಲಿ ಕೆಲಸ ಪ್ರಗತಿಯಲ್ಲಿದೆ.

ಲೋಕಾಪುರ ಉಪ-ಮಾರುಕಟ್ಟೆಯಲ್ಲಿ ಮಂಜೂರಾದ ೨ ಕಾಮಗಾರಿಗಳು ಇನ್ನೂ ಕಾರ್ಯಗತಗೊಂಡಿಲ್ಲ.

ಬುದ್ನಿ ಪಿ.ಎಂ., ಢವಳೇಶ್ವರ ಮತ್ತು ಕಸಬಾ ಜಂಬಗಿಯಲ್ಲಿ ಗೋದಾಮು ನಿರ್ಮಾಣಕ್ಕಾಗಿ ಹಾಗೂ ೨೦೦೫-೦೬ ರಲ್ಲಿ ಪ್ರಾರಂಭಿಸಿದ ಗ್ರಾಮೀಣ ರಸ್ತೆ ನಿರ್ಮಾಣ ಮತ್ತು ೨೦೦೬-೦೭ ರಲ್ಲಿಯ ರಸ್ತೆ ನಿರ್ಮಾಣದ ಕಾರ್ಯಗಳನ್ನು ೩೬,೦೦೬.೩೩ ರೂಪಾಯಿ ವೆಚ್ಚದಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ.

ಗ್ರಾಮೀಣ ಸಂತೆಗಳ ಅಭಿವೃದ್ಧಿಗಾಗಿ ೨೦೦೮ ಜೂನವರೆಗೆ ಶಿರೋಳ ಮತ್ತು ಜುನ್ನೂರ ಗ್ರಾಮಗಳ ಸಂತೆ ಅಭಿವೃದ್ಧಿಗಾಗಿ ಕಾಮಗಾರಿ ಕೈಗೆತ್ತಿಕೊಳ್ಳಲಾಯಿತು. ೧೦.೭೭.೩೪೮ ರೂಪಾಯಿ ವೆಚ್ಚದಲ್ಲಿ ಶಿರೋಳ ಗ್ರಾಮದ ಸಂತೆಯನ್ನು ಪೂರ್ಣಗೊಳಿಸಲಾಯಿತು. ಆದರೆ ಜನ್ನೂರ ಗ್ರಾಮದ ಸಂತೆಯ ಅಭಿವೃದ್ಧಿ ಕಾಮಗಾರಿ ಪ್ರಗತಿಯಲ್ಲಿದೆ.

ಹೀಗೆ ಸದರಿ ವರ್ಷದಲ್ಲಿ ೩೪ ಕಾಮಗಾರಿಗಳಿಗಾಗಿ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸಿ ೧೩ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ.

ಒಟ್ಟಿನಲ್ಲಿ ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ತನ್ನ ಕ್ಷೇತ್ರದಲ್ಲಿ ಬರುವ ಮುಖ್ಯ ಮಾರುಕಟ್ಟೆ, ಮುಧೋಳ ಮತ್ತು ಲೋಕಾಪುರ ಉಪ-ಮಾರುಕಟ್ಟೆ ಅಭಿವೃದ್ಧಿಗಾಗಿ ಸಾಮಾಜಿಕ ವೆಚ್ಚಗಳನ್ನು ವಿವಿಧ ಯೋಜನೆ ಅಡಿಯಲ್ಲಿ ಪೂರ್ಣಗೊಳಿಸಿದೆ. ಇದರಿಂದಾಗಿ ಪೇಟೆ ಕಾರ್ಯಕರ್ತರು, ರೈತರು ಲಾಭ ಪಡೆಯುವಂತಾಗಿದೆ. ಮಾರುಕಟ್ಟೆಯಲ್ಲಿ ಆವಕದ ಪ್ರಮಾಣ ಮತ್ತು ಮಾರಾಟದ ಮೌಲ್ಯ ವೃದ್ಧಿಸುವದಕ್ಕಾಗಿ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿ ಅಭಿವೃದ್ಧಿ ಸಾಧಿಸುವ ಗುರಿಯನ್ನು ತಲುಪುವತ್ತ ಹೆಜ್ಜೆ ಇಡುತ್ತಿದೆ. ಗ್ರಾಮೀಣ

ಪ್ರದೇಶಗಳಲ್ಲಿ ಗೋದಾಮುಗಳನ್ನು ನಿರ್ಮಾಣ ಮಾಡುವ ಮತ್ತು ಗ್ರಾಮೀಣ ಸಂತೆಗಳನ್ನು ಅಭಿವೃದ್ಧಿಪಡಿಸುವ ಕಾರ್ಯದಲ್ಲಿ ಸಮಿತಿಯ ಅಧ್ಯಕ್ಷರು, ಸದಸ್ಯರು ಮತ್ತು ಕಾರ್ಯಾಲಯದ ಅಧಿಕಾರಿಗಳು, ಸಿಬ್ಬಂದಿಯವರ ಪ್ರಾಮಾಣಿಕ ಪ್ರಯತ್ನ ಫಲದಿಂದಾಗಿ ಎರಡನೇಯ ಹಂತದ ಮೂರು ಕಟ್ಟೆಗಳು ಮುಖ್ಯ ಮತ್ತು ಉಪ-ಮಾರುಕಟ್ಟೆಗಳ ಅಭಿವೃದ್ಧಿ ಸಾಧಿಸುವಲ್ಲಿ ಪೂರಕವಾಗಿವೆ.

**೩.೧೧ ಉಪಸಂಹಾರ:**

ಈ ಅಧ್ಯಾಯವು ಮಹಾಲಿಂಗಪುರದ ಮುಖ್ಯ ಕೃಷಿ ಉತ್ಪನ್ನ ಮಾರುಕಟ್ಟೆ, ಉಪ-ಮಾರುಕಟ್ಟೆಗಳು, ಮಾರುಕಟ್ಟೆಗಳ ವ್ಯವಹಾರದ ರೂಢಿಗಳು, ರೀತಿರಿವಾಜುಗಳ ಬಗ್ಗೆ ವಿಸ್ತೃತವಾದ ವಿವರಣೆಯನ್ನು ಕಟ್ಟಿಕೊಡುತ್ತದೆ. ಇಲ್ಲಿ ಮಾರುಕಟ್ಟೆ ಸಮಿತಿಯ ಸೌಲಭ್ಯಗಳು, ಕೈಗೆತ್ತಿಕೊಂಡು ಮುಕ್ತಾಯಗೊಳಿಸಲಾದ ಕಾಮಗಾರಿಗಳ ಪರಿಚಯವನ್ನು ಮಾಡಿಕೊಡಲಾಗಿದೆ.

**ಕೊನೆ ಟಿಪ್ಪಣಿ:**

೧. **ಮಹಾಲಿಂಗಪುರದ ಬೆಲ್ಲದ ಮಾರುಕಟ್ಟೆ** ; ಉದ್ಯಮದರ್ಶಿ, ಲೇ.ಪ್ರೊ. ಜಿ. ಎ. ಮಠಪತಿ,(ಫೆ.,೨೦೦೦) ,ಪು.೪೦

೨. **ಕರ್ನಾಟಕ ವ್ಯವಸಾಯೋತ್ಪನ್ನ ಮಾರಾಟ(ನಿಯಂತ್ರಣ)ಶಾಸನ;** ಎಸ್.ಎಸ್.ಶಂಕರಮೂರ್ತಿ,(೧೯೯೪),ಪು.೧೩೫,೧೩೬,೧೩೭

೩. ೨೦೦೦-೦೧ ನೇ ಸಾಲಿನ ವಾರ್ಷಿಕ ವರದಿ: ಕೃ.ಉ.ಮಾ.ಸ., ಮಹಾಲಿಂಗಪುರ, ಪು.೧

೪. ೧೧-೦೭-೨೦೦೮ ರ ಸಂಕ್ಷಿಪ್ತ ವರದಿ : ಕೃ.ಉ.ಮಾ.ಸ., ಮಹಾಲಿಂಗಪುರ, ಪು.೨

# ಅಧ್ಯಾಯ ನಾಲ್ಕು
# ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಪ್ರಗತಿ ಪರಿಶೀಲನೆ

## ಅಧ್ಯಾಯ ನಾಲ್ಕು :

# ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಪ್ರಗತಿ ಪರಿಶೀಲನೆ

### ೪.೧ ಪೀಠಿಕೆ :

ಕೃಷಿ ಉತ್ಪನ್ನ ಮಾರುಕಟ್ಟೆಯ ಯಶಸ್ಸು, ಆ ಮಾರುಕಟ್ಟೆಯು ಸ್ಥಾಪನೆಯಾಗಿರುವ ಪ್ರದೇಶ, ಅದರಲ್ಲಿ ಆವಕವಾಗುತ್ತಿರುವ ಘೋಷಿತ ಕೃಷಿ ಉತ್ಪನ್ನಗಳ ಪ್ರಮಾಣ, ಆ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿರುವ ಬೆಲೆ ಮುಂತಾದ ಅಂಶಗಳ ಮೇಲೆ ಅವಲಂಬಿತವಾಗಿರುತ್ತದೆ. ಅದರ ಪ್ರಗತಿಯ ಬಗ್ಗೆ ಪರಿಶೀಲಿಸುವದಕ್ಕಾಗಿ ಈ ಅಧ್ಯಾಯದಲ್ಲಿ ಪೇಟೆಯ ಕಾರ್ಯಕರ್ತರ ಬೆಳವಣಿಗೆಯ ದರ, ಪ್ರಮುಖ ಪೇಟೆ ಕಾರ್ಯಕರ್ತ ಸಂಖ್ಯೆಯಲ್ಲಿ ಪ್ರಗತಿ ಅಥವಾ ಹಿನ್ನಡೆ ಬಗ್ಗೆ ತಿಳಿದುಕೊಳ್ಳಲಾಗುತ್ತದೆ.

೨೦೦೦-೦೧ ರಿಂದ ೨೦೦೭-೦೮ ರ ವರೆಗೆ ಈ ಮಾರುಕಟ್ಟೆ ಕ್ಷೇತ್ರದಲ್ಲಿ ಆವಕವಾಗುತ್ತಿದ್ದ ವಿವಿಧ ಘೋಷಿತ ಕೃಷಿ ಉತ್ಪನ್ನಗಳ ಬೆಳವಣಿಗೆಯ ದರದ ಪ್ರವೃತ್ತಿಯನ್ನು ಪರಿಶೀಲಿಸಲಾಗಿದೆ. ಅದಕ್ಕೆ ಕಾರಣಗಳನ್ನು ತಿಳಿದುಕೊಳ್ಳಲಾಗುತ್ತದೆ.

ಅಧ್ಯಯನದ ಅವಧಿಯಲ್ಲಿ ಮಾರುಕಟ್ಟೆ ಸಮಿತಿಯ ಆದಾಯ ಮತ್ತು ವೆಚ್ಚದ ಪ್ರಗತಿಯ ಪರಿಶೀಲನೆ ಮಾಡಲಾಗುತ್ತದೆ. ಆದಾಯದ ವಿವಿಧ ಮೂಲಗಳು ಮತ್ತು ಅವುಗಳ ಪ್ರತಿಶತಃ ಪ್ರಮಾಣ, ವೆಚ್ಚದ ವಿವಿಧ ಮೂಲಗಳು ಹಾಗೂ ಅವುಗಳ ಏರಿಕೆ ಅಥವಾ ಇಳಿಕೆ ಬಗ್ಗೆ ತಿಳಿದುಕೊಳ್ಳಲಾಗುತ್ತದೆ.

ಕೃಷಿ ಉತ್ಪನ್ನ ಮಾರುಕಟ್ಟೆಯು ಲಾಭಗಳಿಸುವ ಉದ್ದೇಶವನ್ನು ಹೊಂದಿರುವದಿಲ್ಲ. ಅಂದಮಾತ್ರಕ್ಕೆ ಅದು ಸಾಮಾಜಿಕ ಚಟುವಟಿಕೆ ಕೈಕೊಳ್ಳಲು ರಚನೆಗೊಂಡ ಸಮಿತಿಯು ಅಲ್ಲ. ಸಮಿತಿಯ ನಿವ್ವಳ ಉಳಿತಾಯವು ಅದರ ಜಾಣಾಕ್ಷತನ ಮತ್ತು ದಕ್ಷತೆಯನ್ನು ತೋರಿಸುತ್ತದೆ. ನಿವ್ವಳ ಉಳಿತಾಯಕ್ಕೆ ಸಂಬಂಧಿಸಿದಂತೆ ಯಾವ ಪ್ರವೃತ್ತಿ ಇದೆ ಎಂದು ತಿಳಿದು ಕೊಳ್ಳಲಾಗುತ್ತದೆ.

ಹೀಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದ ಮಾರುಕಟ್ಟೆಯ ಪ್ರಗತಿಯ ಪರಿಶೀಲನೆ ಹಾಗೂ ಹಿನ್ನಡೆಗೆ ಕಾರಣಗಳನ್ನು ತಿಳಿದುಕೊಂಡು ಮುಂದಿನ ಅಧ್ಯಯನಕ್ಕೆ ಬುನಾದಿಯಾಗುವಂತೆ ಮಾಡುವುದೆ ಈ ಅಧ್ಯಾಯದ ಮೂಲ ಆಶಯವಾಗಿದೆ.

## ೪.೧ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ

ಪೇಟೆ ಕಾರ್ಯಕರ್ತರ ವಿವರ :

| ಅ.ಸಂ. | ಪೇಟೆ ಕಾರ್ಯಕರ್ತರು | ೨೦೦೦-೦೧ | ೨೦೦೧-೦೨ | ೨೦೦೨-೦೩ | ೨೦೦೩-೦೪ | ೨೦೦೪-೦೫ | ೨೦೦೫-೦೬ | ೨೦೦೬-೦೭ | ೨೦೦೭-೦೮ |
|---|---|---|---|---|---|---|---|---|---|
| ೧ | ದಲ್ಲಾಲರು | ೧೦೧ | ೯೯ | ೯೧ | ೯೪ | ೯೭ | ೯೨ | ೯೨ | ೮೬ |
| ೨ | ಖರೀದಿದಾರರು | ೧೧೫ | ೧೨೭ | ೧೦೯ | ೧೧೮ | ೧೧೫ | ೧೩೩ | ೧೩೯ | ೧೧೭ |
| ೩ | ಆಮದುದಾರರು | ೧೬ | ೧೮ | ೧೮ | ೨೮ | ೨೮ | ೨೯ | ೨೯ | ೨೮ |
| ೪ | ರಫ್ತುದಾರರು | ೯೬ | ೧೨೩ | ೧೧೯ | ೧೧೫ | ೧೧೩ | ೧೨೯ | ೧೨೮ | ೧೧೬ |
| ೫ | ದಾಸ್ತಾನುಗಾರರು | ೧೬೭ | ೧೭೫ | ೧೫೪ | ೧೬೬ | ೧೬೪ | ೧೭೩ | ೧೬೪ | ೧೫೯ |
| ೬ | ಸಂಸ್ಕರಣಕಾರರು | ೦೪ | ೦೭ | ೦೫ | ೦೭ | ೦೩ | ೦೨ | ೦೨ | ೦೧ |
| ೭ | ಕ್ರಷರ್ಸ್ | ೦೪ | ೦೬ | ೦೫ | ೦೭ | ೦೫ | ೦೫ | ೦೭ | ೧೦ |
| ೮ | ಟ್ರಕ್ ಸಾರಿಗೆಯವರು | ೦೧ | ೦೨ | ೦೧ | ೨೦ | ೧೦ | -- | -- | -- |
| ೯ | ಹಮಾಲರು | ೧೧೮ | ೩೨೯ | ೧೬೧ | ೧೪೪ | ೧೮೫ | ೧೩೯ | ೩೫೬ | ೨೫೧ |
| ೧೦ | ಹತ್ತಿಯನ್ನು ಬಿಡಿಸುವವರು (ಜಿನ್ನರ್ಸ್) | ೦೨ | ೦೨ | ೦೧ | ೦೧ | ೦೧ | ೦೧ | ೦೧ | ೦೧ |
| ೧೧ | ಚಕ್ಕಡಿಯವರು | ೨೯ | ೨೮ | -- | -- | -- | -- | ೪೭ | ೪೭ |
| ೧೨ | ತೂಕದವರು | ೨೩ | ೨೧ | ೨೧ | ೨೧ | ೨೧ | ೨೦ | ೧೯ | ೧೯ |
| ೧೩ | ಚಿಲ್ಲರೆ ವರ್ತಕರು | ೧೭ | ೩೪ | ೪೮ | ೭೮ | ೭೪ | ೯೪ | ೧೬೫ | ೧೬೫ |
| ೧೪ | ವೇರ್‌ಹೌಸಮನ್ | -- | -- | -- | -- | ೦೧ | ೦೧ | ೦೧ | ೦೧ |
| ೧೫ | ಪ್ರೆಸರ್ಸ್ | ೦೧ | ೦೧ | ೦೧ | ೦೧ | ೦೧ | ೦೧ | ೦೧ | ೦೧ |
| | ಒಟ್ಟು | ೬೯೪ | ೯೭೨ | ೭೩೪ | ೮೦೦ | ೮೧೮ | ೮೧೯ | ೧೧೫೧ | ೧೦೦೨ |

ಮಾಹಿತಿ ಮೂಲ : ಸಂಕ್ಷಿಪ್ತ ವರದಿ -೨೦೦೮ ಕೃ.ಉ.ಮಾ.ಸ.ಮಾ.

೨೦೦೦-೦೧ ರಿಂದ ೨೦೦೭-೦೮ ರವರೆಗಿನ ಪೇಟೆ ಕಾರ್ಯಕರ್ತರ ಬೆಳವಣಿಗೆಯನ್ನು ತೋರಿಸುವ ಸ್ಥಂಭ ಚಿತ್ರ

೧೦೦೦
೯೦೦
೮೦೦
೭೦೦
೬೦೦
೫೦೦
೪೦೦
೩೦೦
೨೦೦
೧೦೦

೬೯೪ ೯೭೨ ೭೪೪ ೮೦೦ ೮೧೮ ೮೧೯ ೧೧೫೧ ೧೦೦೨

೨೦೦೦-೦೧ ೨೦೦೧-೦೨ ೨೦೦೨-೦೩ ೨೦೦೩-೦೪ ೨೦೦೪-೦೫ ೨೦೦೫-೦೬ ೨೦೦೬-೦೭ ೨೦೦೭-೦೮




೨೦೦೭-೦೮ ರಲ್ಲಿ ವಿವಿಧ ಪೇಟೆ ಕಾರ್ಯಕರ್ತರ ಪ್ರಮಾಣ ತೋರಿಸುವ ವೃತ್ತಖಂಡಾ ಚಿತ್ರ

ಮೇಲಿನ ಕೋಷ್ಠಕದಿಂದ ತಿಳಿದುಬರುವದೇನೆಂದರೆ, ೨೦೦೦-೦೧ ರಲ್ಲಿ ಒಟ್ಟು ಪೇಟೆ ಕಾರ್ಯಕರ್ತರ ಸಂಖ್ಯೆ ೬೯೪, ೨೦೦೧-೦೨ ಕ್ಕೆ ೯೭೨, ೨೦೦೨-೦೩ ಕ್ಕೆ ೭೩೪, ೨೦೦೩-೦೪ಕ್ಕೆ ೮೦೦, ೨೦೦೪-೨೦೦೫ ಕ್ಕೆ ೮೧೮, ೨೦೦೫-೦೬ ಕ್ಕೆ ೮೧೯, ೨೦೦೬-೦೭ ಕ್ಕೆ ೧೧೫೧ ಮತ್ತು ೨೦೦೭-೦೮ ರಲ್ಲಿ ೧೦೦೨ ಇರುತ್ತದೆ. ಆಧಾರ ವರ್ಷದಿಂದ ಮುಂದಿನ ವರ್ಷ ಏರಿಕೆ, ಮತ್ತೆ ೨೦೦೨-೦೩ ಕ್ಕೆ ಇಳಿಕೆ, ೨೦೦೩-೦೪ ಕ್ಕೆ ಏರಿಕೆ, ಹೀಗೆ ಒಂದು ವರ್ಷದಿಂದ ಇನ್ನೊಂದು ವರ್ಷಕ್ಕೆ ಏರಿಕೆ ಮತ್ತು ಇಳಿಕೆಯ ಪ್ರವೃತ್ತಿಯನ್ನು ಕಂಡುಕೊಳ್ಳಲಾಗುತ್ತದೆ.

★ ಪ್ರತಿ ವರ್ಷ ಒಟ್ಟು ಪೇಟೆ ಕಾರ್ಯಕರ್ತರಲ್ಲಿ ದಲಾಲಲರು, ಖರೀದಿದಾರರು, ಆಮದುದಾರರು, ರಫ್ತುದಾರರು, ದಾಸ್ತಾನುಗಾರರು, ಹಮಾಲರು, ತೂಕದವರು ಮತ್ತು ಹಮಾಲರ ಸಂಖ್ಯೆಯ ಸರಾಸರಿ ಪ್ರಮಾಣ ೮೯.೧೯ ರಷ್ಟು ಇರುತ್ತದೆ.

★ ಹಮಾಲರ ಸಂಖ್ಯೆಯು ೨೦೦೦-೦೧ ರಲ್ಲಿ ೧೧೮ ಇದ್ದದ್ದು, ೨೦೦೧-೦೨ ಕ್ಕೆ ೩೨೯ ಹಾಗೂ ೨೦೦೬-೦೭ ಕ್ಕೆ ೩೫೬ ಸಂಖ್ಯೆಗೆ ಏರಿಕೆಯಾಗಿದೆ.

★ ಸಂಸ್ಕರಣಕಾರರ ಸಂಖ್ಯೆಯಲ್ಲಿ ೨೦೦೦-೦೧ ಕ್ಕೆ ೦೪ ಇದ್ದು, ೨೦೦೧-೦೨ ಮತ್ತು ೨೦೦೩-೦೪ ರಲ್ಲಿ ೦೭ ಕ್ಕೆ ಏರಿತ್ತು ಆದರೆ ೨೦೦೪-೦೫ ರಿಂದ ೨೦೦೭-೦೮ ರ ವರೆಗೆ ಇಳಿಕೆ ಪ್ರವೃತ್ತಿ ತೋರಿಸುತ್ತದೆ.

★ ವೇರ್‌ಹೌಸಮನ್‌ರ ಸಂಖ್ಯೆ ಅಧ್ಯಯನದ ಆರಂಭ ವರ್ಷದಿಂದ ೨೦೦೩-೦೪ ರವರೆಗೆ ಶೂನ್ಯ ಇದೆ. ಆದರೆ ೨೦೦೪-೦೫ ರಿಂದ ೨೦೦೭-೦೮ ರವರೆಗೆ ಅವರ ಸಂಖ್ಯೆ ೧ ಇದೆ.

★ ಪ್ರೆಸರ್ಸ್ ಸಂಖ್ಯೆಯಲ್ಲಿ ಯಾವುದೇ ಬದಲಾವಣೆ ಇಲ್ಲ.

ಹೀಗೆ ಒಟ್ಟು ಪೇಟೆ ಕಾರ್ಯಕರ್ತರ ಸಂಖ್ಯೆಯಲ್ಲಿ ಏರಿಕೆ ಇದ್ದರೂ, ಪ್ರತಿ ಪೇಟೆಕಾರ್ಯಕರ್ತರ ಸಂಖ್ಯೆಯಲ್ಲಿ ಏರಿಳಿತದ ಪ್ರವೃತ್ತಿಯು ಕಂಡುಬರುತ್ತದೆ.

೪.೨ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರದಲ್ಲಿ ವ್ಯವಹರಿಸುವ ವಿವಿಧ ಪೇಟೆಕಾರ್ಯಕರ್ತರ ಪ್ರತಿಶತವನ್ನು ಈ ಕೋಷ್ಟಕದಲ್ಲಿ ತೋರಿಸಲಾಗಿದೆ.

| ಅ. ಸಂ. | ಪೇಟೆ ಕಾರ್ಯಕರ್ತರು | ೨೦೦೦-೦೧ | | ೨೦೦೧-೦೨ | | ೨೦೦೨-೨೦೦೩ | | ೨೦೦೩-೨೦೦೪ | | ೨೦೦೪-೨೦೦೫ | | ೨೦೦೫-೨೦೦೬ | | ೨೦೦೬-೨೦೦೭ | | ೨೦೦೭-೨೦೦೮ | |
|---|---|---|---|---|---|---|---|---|---|---|---|---|---|---|---|---|---|
| | | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ೧ | ದಲ್ಲಾಲರು | ೧೦೧ | ೧೪.೫೫ | ೯೯ | ೧೦.೧೯ | ೯೧ | ೧೨.೩೯ | ೯೪ | ೧೧.೭೫ | ೯೭ | ೧೧.೫೯ | ೯೨ | ೧೧.೨೩ | ೯೨ | ೦೭.೯೯ | ೮೬ | ೦೮.೫೮ |
| ೨ | ಖರೀದಿದಾರರು | ೧೧೫ | ೧೬.೫೭ | ೧೨೭ | ೧೩.೦೭ | ೧೦೯ | ೧೪.೮೫ | ೧೧೮ | ೧೪.೭೫ | ೧೧೫ | ೧೪.೦೬ | ೧೩೩ | ೧೬.೨೪ | ೧೩೯ | ೧೨.೦೮ | ೧೧೭ | ೧೧.೬೮ |
| ೩ | ಆಮದುದಾರರು | ೧೬ | ೦೨.೩೧ | ೧೮ | ೦೧.೮೫ | ೧೮ | ೦೨.೪೫ | ೨೮ | ೦೩.೫೦ | ೨೮ | ೦೩.೪೨ | ೨೯ | ೦೩.೫೪ | ೨೯ | ೦೨.೫೨ | ೨೮ | ೦೨.೭೯ |
| ೪ | ರಪ್ತುದಾರರು | ೯೬ | ೧೩.೮೩ | ೧೨೩ | ೧೨.೬೫ | ೧೧೯ | ೧೬.೨೧ | ೧೧೫ | ೧೪.೩೮ | ೧೧೩ | ೧೩.೮೧ | ೧೨೯ | ೧೫.೭೫ | ೧೨೮ | ೧೧.೧೨ | ೧೧೬ | ೧೧.೭೭ |
| ೫ | ದಾಸ್ತಾನುಗಾರರು | ೧೬೭ | ೨೪.೦೬ | ೧೭೫ | ೧೮.೦೦ | ೧೫೪ | ೨೦.೯೮ | ೧೬೬ | ೨೦.೭೫ | ೧೬೪ | ೨೦.೦೫ | ೧೭೩ | ೨೧.೧೨ | ೧೬೪ | ೧೪.೨೫ | ೧೫೯ | ೧೫.೮೭ |
| ೬ | ಸಂಸ್ಕರಣಕಾರರು | ೦೪ | ೦.೫೮ | ೦೭ | ೦.೭೨ | ೦೫ | ೦.೬೮ | ೦೭ | ೦.೮೮ | ೦೩ | ೦.೩೭ | ೦೨ | ೦.೨೪ | ೦೨ | ೦.೧೭ | ೦೧ | ೦.೦೯ |
| ೭ | ಕ್ರಷರ್ಸ್ | ೦೪ | ೦.೫೮ | ೦೬ | ೦.೬೧ | ೦೫ | ೦.೬೮ | ೦೭ | ೦.೮೮ | ೦೫ | ೦.೬೧ | ೦೫ | ೦.೬೧ | ೦೭ | ೦.೬೧ | ೧೦ | ೦.೯೯ |
| ೮ | ಟ್ರಕ್ ಸಾರಿಗೆದಾರರು | ೦೧ | ೦.೧೪ | ೦೨ | ೦.೨೦ | ೦೧ | ೦.೧೪ | ೨೦ | ೨.೫೦ | ೧೦ | ೦೧.೨೨ | -- | -- | -- | -- | -- | -- |
| ೯ | ಹಮಾಲರು | ೧೧೮ | ೧೭.೦೦ | ೩೨೯ | ೩೩.೮೫ | ೧೬೧ | ೨೧.೯೩ | ೧೧೪ | ೧೮.೦೦ | ೧೮೫ | ೨೨.೬೨ | ೧೩೯ | ೧೬.೯೭ | ೩೫೬ | ೩೦.೯೩ | ೨೫೧ | ೨೫.೦೪ |
| ೧೦ | ಹತ್ತಿ ಬೇರ್ಪಡಿಸುವವ | ೦೨ | ೦.೨೮ | ೦೨ | ೦.೨೦ | ೦೧ | ೦.೧೪ | ೦೧ | ೦.೧೩ | ೦೧ | ೦.೧೨ | ೦೧ | ೦.೧೨ | ೦೧ | ೦.೦೯ | ೦೧ | ೦.೦೯ |
| ೧೧ | ಚಕ್ಕಡಿಯವರು | ೨೯ | ೦೪.೧೮ | ೨೮ | ೦೨.೮೮ | -- | -- | -- | -- | -- | -- | -- | -- | ೪೭ | ೪.೦೮ | ೪೭ | ೪.೬೯ |
| ೧೨ | ತೂಕದವರು | ೨೩ | ೦೩.೩೧ | ೨೧ | ೦೨.೧೬ | ೨೧ | ೦೨.೮೬ | ೨೧ | ೦೨.೬೨ | ೨೧ | ೦೨.೫೭ | ೨೦ | ೦೨.೪೪ | ೧೯ | ೦೧.೬೫ | ೧೯ | ೦೧.೮೯ |
| ೧೩ | ಚಿಲ್ಲರೆ ವರ್ತಕರು | ೧೭ | ೦೨.೪೫ | ೩೪ | ೦೩.೫೦ | ೪೮ | ೦೬.೫೪ | ೭೮ | ೦೯.೭೫ | ೭೪ | ೦೯.೩೨ | ೯೪ | ೧೧.೫೦ | ೧೬೫ | ೧೪.೩೩ | ೧೬೫ | ೧೬.೪೪ |
| ೧೪ | ವೇರ್‌ಹೌಸ್‌ಮನ್ | -- | -- | -- | -- | -- | -- | -- | -- | ೦೧ | ೦.೧೨ | ೦೧ | ೦.೧೨ | ೦೧ | ೦.೦೯ | ೦೧ | ೦.೦೯ |
| ೧೫ | ಪ್ರೆಸರ್ಸ್ | ೦೧ | ೦.೧೬ | ೦೧ | ೦.೧೦ | ೦೧ | ೦.೧೫ | ೦೧ | ೦.೧೧ | ೦೧ | ೦.೧೨ | ೦೧ | ೦.೧೨ | ೦೧ | ೦.೦೯ | ೦೧ | ೦.೦೯ |
| | ಒಟ್ಟು | ೬೯೪ | ೧೦೦ | ೯೭೨ | ೧೦೦ | ೭೩೪ | ೧೦೦ | ೮೦೦ | ೧೦೦ | ೮೧೮ | ೧೦೦ | ೮೧೯ | ೧೦೦ | ೧೧೫೧ | ೧೦೦ | ೧೦೦೨ | ೧೦೦ |

ಮಾಹಿತಿ ಆಧಾರ : ಕೃ.ಉ.ಮಾ.ಸ. ಮಹಾಲಿಂಗಪುರ, ಸಂಕ್ಷಿಪ್ತ ವರದಿ - ೨೦೦೮

ಅಧ್ಯಯನದ ಅವಧಿಯಲ್ಲಿಯ ಪೇಟೆಯ ಕಾರ್ಯಕರ್ತರಲ್ಲಿ ವಿವಿಧ ಪೇಟೆ ಕಾರ್ಯಕರ್ತರ % ಪ್ರಮಾಣ ಎಷ್ಟು ಇರುತ್ತದೆಂದು ಮೇಲಿನ ಕೋಷ್ಟಕ ತೋರಿಸುತ್ತದೆ.

**೧) ದಲ್ಲಾಲರು :** ೨೦೦೦-೦೧ ರಲ್ಲಿ ಇವರ ಸಂಖ್ಯೆ ೧೦೧ ಇದ್ದು, ಒಟ್ಟು ಪೇಟೆ ಕಾರ್ಯಕರ್ತರಲ್ಲಿ ಶೇ. ೧೪.೫೫, ೨೦೦೨ ರಲ್ಲಿ ೧೦.೧೯ ರಷ್ಟು, ೨೦೦೩-೦೪ ರಲ್ಲಿ ೧೨.೩೯, ೨೦೦೪-೦೫ ರಲ್ಲಿ ೧೧.೭೫, ೨೦೦೪-೦೫ ರಲ್ಲಿ ೧೧.೫೯, ೨೦೦೫-೦೬ ರಲ್ಲಿ ೧೧.೨೩, ೨೦೦೬-೦೭ ರಲ್ಲಿ ೭.೯೯ ಮತ್ತು ೨೦೦೭-೦೮ ರಲ್ಲಿ ೮.೫೮ ಇದೆ. ಇದು ಒಟ್ಟು ಇಳಿಕೆ ಪ್ರವೃತ್ತಿ ತೋರಿಸುತ್ತದೆ.

**೨) ಖರೀದಿದಾರರು :** ೨೦೦೦-೦೧ ರಲ್ಲಿ ಶೇ. ೧೬.೫೭, ೨೦೦೧-೦೨ ರಲ್ಲಿ ೧೩.೦೭, ೨೦೦೨-೦೩ ರಲ್ಲಿ ೧೪.೮೫, ೨೦೦೩-೦೪ ರಲ್ಲಿ ೧೪.೭೫, ೨೦೦೪-೦೫ ರಲ್ಲಿ ೧೧.೫೯, ೨೦೦೫-೦೬ ರಲ್ಲಿ ೧೬.೨೪, ೨೦೦೬-೦೭ ರಲ್ಲಿ ೧೨.೦೮ ಮತ್ತು ೨೦೦೭-೦೮ ರಲ್ಲಿ ೧೧.೬೮ ಹೀಗೆ ೧೬.೫೭ ರಿಂದ ೧೧.೬೮ ಕ್ಕೆ ಕುಸಿದು ಇಳಿಕೆಯ ಪ್ರವೃತ್ತಿ ತೋರಿಸುತ್ತದೆ.

**೩) ಆಮದುದಾರರು :** ೨೦೦೦-೦೧ ರಿಂದ ೨೦೦೭-೦೮ ರ ವರೆಗಿನ ಶೇಕಡಾ ಪ್ರಮಾಣ ಕ್ರಮವಾಗಿ ೦೨.೩೧, ೧.೮೫, ೨.೪೫, ೩.೫೦, ೩.೪೨, ೩.೫೪, ೨.೫೨ ಮತ್ತು ೨.೭೯ ಇದೆ. ಇದು ಮೊದಲ ನಾಲ್ಕು ವರ್ಷಗಳಲ್ಲಿ ಏರಿಕೆಯ, ಕೊನೆಯ ಎರಡು ವರ್ಷ ಇಳಿಕೆಯ ಪ್ರವೃತ್ತಿ ಹೊಂದಿದೆ.

**೪) ರಫ್ತುದಾರರು :** ೨೦೦೦-೦೧ ರಿಂದ ೨೦೦೭-೦೮ ರವರೆಗಿನ ಶೇಕಡಾವಾರು ಪ್ರಮಾಣ ಕ್ರಮವಾಗಿ ೧೩.೮೩, ೧೨.೬೫, ೧೬.೨೧, ೧೪.೩೮, ೧೩.೮೧, ೧೫.೭೫, ೧೧.೧೨ ಮತ್ತು ೧೧.೭೭ ಇದೆ. ಇದರಲ್ಲಿ ೨೦೦೫-೦೬ ರಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿದೆ. ಅತೀ ಕಡಿಮೆ ಶೇ. ೧೧.೧೨ - ೨೦೦೬-೦೭ ರಲ್ಲಿದೆ.

**೫) ದಾಸ್ತಾನುದಾರರು :** ೨೦೦೦-೦೧ ರಿಂದ ೨೦೦೭-೦೮ ರವರೆಗೆ ಶೇ. ಪ್ರಮಾಣ ಕ್ರಮವಾಗಿ ೨೪.೦೬, ೧೮.೦೦, ೨೦.೯೮, ೨೦.೭೫, ೨೦.೦೫, ೨೧.೧೨, ೧೪.೨೫ ಮತ್ತು ೧೫.೮೭ ಇದೆ. ೨೦೦೦-೦೧ ರಲ್ಲಿ ಅಧಿಕ ಪ್ರಮಾಣ ಮತ್ತು ೨೦೦೬-೦೭ ರಲ್ಲಿ ಕಡಿಮೆ ಪ್ರಮಾಣ ಹೊಂದಿದೆ. ದಾಸ್ತಾನುಗಾರರ ಸಂಖ್ಯೆಯಲ್ಲಿ ಇಳಿಕೆಯ ಪ್ರವೃತ್ತಿ ಇದೆ.

**೬) ಸಂಸ್ಕರಣಕಾರರು :** ಶೇ. ೦.೫೮ ರಿಂದ ಪ್ರಾರಂಭವಾಗಿ ೦.೦೯ ದಿಂದ ಇಳಿಕೆ ಹೊಂದಿದೆ.

**೭) ಕ್ರಷರ್ಸ್ :** ೦.೫೮ ರಿಂದ ಪ್ರಾರಂಭವಾಗಿ ೦.೯೯ ದಿಂದ ಏರಿಕೆ ಪ್ರವೃತ್ತಿ ಇದೆ.

**೮) ಟ್ರಕ್ ಸಾರಿಗೆಯವರು :** ಮೊದಲೆರಡು ವರ್ಷ ಶೇ. ೦.೧೪ ರಷ್ಟಿದೆ, ೨೦೦೩-೦೪ ರಲ್ಲಿ ೨.೫೦ ಮತ್ತು ೨೦೦೪-೦೫ ಕ್ಕೆ ೦೧.೨೨ ಇದ್ದು ಮುಂದಿನ ವರ್ಷಗಳಲ್ಲಿ ಸಂಖ್ಯಾ ಸೊನ್ನೆ.

**೯) ಹಮಾಲರು :** ೨೦೦೧-೦೨ ರಲ್ಲಿ ಮತ್ತು ೨೦೦೬-೦೭ ರಲ್ಲಿ ಕ್ರಮವಾಗಿ ೩೩.೮೫ ಮತ್ತು ೩೦.೯೩ ಇದೆ.

**೧೦) ಹತ್ತಿ ಬೇರ್ಪಡಿಸುವವರು :** ಇಳಿಕೆಯ ಪ್ರವೃತ್ತಿ ಹೊಂದಿದೆ.

**೧೧) ತೂಕದವರು :** ೨೦೦೦-೦೧ ರಲ್ಲಿ ಸಂಖ್ಯೆ ೨೩ ಇದ್ದು ೨೦೦೭-೦೮ ಕ್ಕೆ ೧೯ ಕ್ಕೆ ಇಳಿದಿದೆ. ಶೇ ಪ್ರಮಾಣ ೦೩.೩೧ ರಿಂದ ೧.೮೯ ಕ್ಕೆ ಕುಸಿದಿದೆ.

**೧೨) ಚಿಲ್ಲರೆ ವರ್ತಕರು :** ಶೇ. ೨.೪೫ ರಿಂದ ಪ್ರಾರಂಭವಾಗಿ ೧೬.೪೪ ಕ್ಕೆ ಏರಿದೆ.

ಹೀಗೆ ವಿವಿಧ ಪೇಟೆಕಾರ್ಯರ್ಕರ್ತರ ಪ್ರತಿಶತ ಪ್ರಮಾಣದಲ್ಲಿ ಗಣನೀಯ ಪ್ರಮಾಣದಲ್ಲಿ ಏರಿಳಿತ ಕಂಡುಬರುತ್ತದೆ.

**೪.೩ (ಅ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ವಿವಿಧ ಪೇಟೆ ಪ್ರಮುಖ ಕಾರ್ಯರ್ಕರ್ತರ ಬೆಳವಣಿಗೆಯ ದರ ತೋರಿಸುವ ಕೋಷ್ಟಕ**

| ಅ.ಸಂ. | ವರ್ಷ | ದಲ್ಲಾಲರು | | ಖರೀದಿದಾರರು | | ಆಮದುದಾರರು | | ರಫ್ತುದಾರರು | |
|---|---|---|---|---|---|---|---|---|---|
| | | ಸಂಖ್ಯೆ | ಪ್ರತಿಶತ. | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ೧ | ೨೦೦೦-೨೦೦೧ | ೧೦೧ | -- | ೧೧೫ | -- | ೧೬ | -- | ೯೬ | -- |
| ೨ | ೨೦೦೧-೨೦೦೨ | ೯೯ | ೯೮.೦೨ | ೧೨೭ | ೧೧೦.೪೩ | ೧೮ | ೧೧೨.೫೦ | ೧೨೩ | ೧೨೮.೧೨ |
| ೩ | ೨೦೦೨-೨೦೦೩ | ೯೧ | ೯೧.೯೧ | ೧೦೯ | ೮೫.೮೩ | ೧೮ | ೧೦೦.೦೦ | ೧೧೯ | ೯೬.೭೫ |
| ೪ | ೨೦೦೩-೨೦೦೪ | ೯೪ | ೧೦೩.೩೦ | ೧೧೮ | ೧೦೮.೨೫ | ೨೮ | ೧೫೫.೫೬ | ೧೧೫ | ೯೬.೬೩ |
| ೫ | ೨೦೦೪-೨೦೦೫ | ೯೭ | ೧೦೩.೧೯ | ೧೧೫ | ೯೭.೪೬ | ೨೮ | ೧೦೦.೦೦ | ೧೧೩ | ೯೮.೨೬ |
| ೬ | ೨೦೦೫-೨೦೦೬ | ೯೨ | ೯೪.೮೫ | ೧೩೩ | ೧೧೫.೬೫ | ೨೯ | ೧೦೩.೫೭ | ೧೨೯ | ೧೧೪.೧೬ |
| ೭ | ೨೦೦೬-೨೦೦೭ | ೯೨ | ೧೦೦.೦೦ | ೧೩೯ | ೧೦೪.೫೧ | ೨೯ | ೧೦೦.೦೦ | ೧೨೮ | ೯೯.೨೨ |
| ೮ | ೨೦೦೭-೨೦೦೮ | ೮೬ | ೯೩.೪೮ | ೧೧೭ | ೮೪.೧೭ | ೨೮ | ೯೬.೫೫ | ೧೧೬ | ೯೦.೬೩ |

(೨೦೦೦-೦೧ ನ್ನು (ಆರ್ಥಿಕ) ವರ್ಷವೆಂದು ಪರಿಗಣಿಸಲಾಗಿದೆ)

೪.೩ (ಬ)

| ಅ.ಸಂ. | ವರ್ಷ | ದಾಸ್ತಾನುದಾರರು | | ಹಮಾಲರು | | ತೂಕದವರು | | ಚಿಲ್ಲರೆ ವರ್ತಕ | |
|---|---|---|---|---|---|---|---|---|---|
| | | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ | ಸಂಖ್ಯೆ | ಪ್ರತಿಶತ |
| ೧ | ೨೦೦೦-೨೦೦೧ | ೧೬೭ | -- | ೧೧೮ | -- | ೨೩ | -- | ೧೭ | |
| ೨ | ೨೦೦೧-೨೦೦೨ | ೧೭೫ | ೧೦೪.೭೯ | ೩೭೯ | ೨೭೮.೮೧ | ೨೧ | ೯೧.೩೦ | ೩೪ | ೨೦೦.೦೦ |
| ೩ | ೨೦೦೨-೨೦೦೩ | ೧೫೪ | ೮೮.೦೦ | ೧೭೧ | ೪೮.೯೪ | ೨೧ | ೧೦೦.೦೦ | ೪೮ | ೧೪೧.೧೮ |
| ೪ | ೨೦೦೩-೨೦೦೪ | ೧೬೬ | ೧೦೭.೭೯ | ೧೪೪ | ೮೯.೪೪ | ೨೧ | ೧೦೦.೦೦ | ೭೮ | ೧೬೨.೫೦ |
| ೫ | ೨೦೦೪-೨೦೦೫ | ೧೬೪ | ೯೮.೮೦ | ೧೮೫ | ೧೨೮.೪೭ | ೨೧ | ೧೦೦.೦೦ | ೭೪ | ೯೪.೮೭ |
| ೬ | ೨೦೦೫-೨೦೦೬ | ೧೭೩ | ೧೦೫.೪೮ | ೧೩೯ | ೭೫.೧೪ | ೨೦ | ೯೫.೨೪ | ೯೪ | ೧೨೭.೦೨ |
| ೭ | ೨೦೦೬-೨೦೦೭ | ೧೬೪ | ೯೪.೭೯ | ೩೫೬ | ೨೫೬.೧೨ | ೧೯ | ೯೫.೦೦ | ೧೬೫ | ೧೭೫.೫೩ |
| ೮ | ೨೦೦೭-೨೦೦೮ | ೧೫೯ | ೯೬.೯೫ | ೨೫೧ | ೭೦.೫೧ | ೧೯ | ೧೦೦.೦೦ | ೧೬೫ | ೧೦೦.೦೦ |

**೪.೨ ಪೇಟೆ ಕಾರ್ಯಕರ್ತರ ಬೆಳವಣಿಗೆ ದರ**

ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ವ್ಯವಹಾರದ ಕಾರ್ಯದಲ್ಲಿ ನಿರತರಾದ ವಿವಿಧ ಪೇಟೆ ಕಾರ್ಯಕರ್ತರ ಬೆಳವಣಿಗೆ ದರದ ಬಗ್ಗೆ ವಿಶ್ಲೇಷಣೆ, ಈ ಮಾರುಕಟ್ಟೆಯ ಕ್ಷೇತ್ರದಲ್ಲಿ ೧೫ ವರ್ಗದ ಪೇಟೆಕಾರ್ಯಕರ್ತರು ವ್ಯವಹಾರದ ಕಾರ್ಯದಲ್ಲಿ ನಿರತರಾಗಿದ್ದಾರೆ. ಆದರೆ ಮುಖ್ಯವಾದ ೮ ವರ್ಗದ ಪೇಟೆ ಕಾರ್ಯಕರ್ತರ ಬೆಳವಣಿಗೆ ದರವನ್ನು ಹಾಗೂ ಅವುಗಳ ಧೋರಣೆ ಮತ್ತು ಪ್ರವೃತ್ತಿಯ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

**೧) ದಲ್ಲಾಲರು :** ದಲ್ಲಾಲರು ಪೇಟೆಯ ವ್ಯವಹಾರ ಚುಟವಟಿಕೆಗೆ ಚಾಲನೆ ಒದಗಿಸಲು ಅಂಗಡಿ ಸಹಿತ ಗೋದಾಮಿನ ವ್ಯವಸ್ಥೆಯನ್ನು ಹೊಂದಿರುತ್ತಾರೆ. ೨೦೦೦-೦೧ ರಲ್ಲಿ ಈ ಪೇಟಿ ಕಾರ್ಯಕರ್ತರ ಸಂಖ್ಯೆ ೧೦೧ ಇತ್ತು. ಅದು ನಿರಂತರವಾಗಿ ಇಳಿಯುತ್ತಾ ಎಂದು ೨೦೦೭-೦೮ರಲ್ಲಿ ೮೬ ಕ್ಕೆ ತಲುಪಿದೆ. ಈ ಇಳಿಕೆಯ ದರ ಇಂತಿದೆ :

೧) ೨೦೦೧-೦೨ ರಲ್ಲಿ ೯೯ ದಲ್ಲಾಲರು ಕಾರ್ಯನಿರ್ವಹಿಸುತ್ತಿದ್ದರು. ೨೦೦೦-೦೧ ಕ್ಕೆ ಹೋಲಿಸಿದಾಗ ಈ ಪೇಟೆಕಾರ್ಯಕರ್ತರಲ್ಲಿ ೧.೯೮ ರಷ್ಟು ಇಳಿಕೆಯಾಗಿದ್ದು ಕಂಡುಬರುತ್ತದೆ.

೨) ೨೦೦೨-೦೩ ರಲ್ಲಿ ದಲ್ಲಾಲರ ಸಂಖ್ಯೆ ೯೧, ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೯.೯೦, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೮.೦೧ ರಷ್ಟು ಇದ್ದು, ಇಳಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ.

೩) ೨೦೦೩-೦೪ ರಲ್ಲಿ ದಲ್ಲಾಲರ ಸಂಖ್ಯೆ ೯೪ ಇರುತ್ತದೆ. ೨೦೦೦-೦೧ಕ್ಕೆ ಹೋಲಿಸಿದರೆ ೬.೯೩, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫.೦೫ ರಷ್ಟು ಇಳಿಕೆಯಾದರೆ, ೨೦೦೨-೦೩ ಕ್ಕೆ ಹೋಲಿಸಿದಾಗ ಶೇ. ೩.೩೦ ರ ಪ್ರಮಾಣದಲ್ಲಿ ಏರಿಕೆಯು ಕಂಡುಬರುತ್ತದೆ.

೪) ೨೦೦೪-೦೫ ರಲ್ಲಿ ದಲ್ಲಾಲರ ಸಂಖ್ಯೆ ೯೭ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೩.೯೬, ೨೦೦೧-೦೨ ಕ್ಕೆ ಶೇ. ೨೦.೨೦ ರಷ್ಟು ಇಳಿಕೆಯಾದರೆ, ೨೦೦೨-೦೩ ಕ್ಕೆ ಹೋಲಿಸಿದಾಗ ಶೇ. ೬.೬೦, ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೩.೧೯ ರಷ್ಟು ಏರಿಕೆಯನ್ನು ತೋರಿಸುತ್ತದೆ.

೫) ೨೦೦೫-೦೬ ರಲ್ಲಿ ದಲ್ಲಾಲರ ಸಂಖ್ಯೆ ೯೨ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೮.೯೧, ೨೦೦೧-೦೨ ರಲ್ಲಿ ಶೇ. ೭.೦೭ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೧೦.೧೦ ರಷ್ಟು ೨೦೦೩-೦೪ ರ ಶೇ. ೨.೧೩ ರಷ್ಟು ಮತ್ತು ೨೦೦೪-೦೫ ರ ಶೇ. ೫.೧೫ ರ ಪ್ರಮಾಣದಲ್ಲಿ ಇಳಿಕೆಯಾಗಿರುವದು ಕಂಡುಬರುತ್ತದೆ.

೬) ೨೦೦೬-೦೭ ರಲ್ಲಿ ದಲ್ಲಾಲರ ಸಂಖ್ಯೆ ೯೨ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೮.೯೧, ೨೦೦೧-೦೨ ರಲ್ಲಿ ಶೇ. ೭.೦೭ ರಷ್ಟು, ೨೦೦೨-೦೩ ಕ್ಕೆ ಶೇ. ೧೦.೧೦ ರಷ್ಟು, ೨೦೦೩-೦೪ ರ ಶೇ. ೨.೧೩ ರಷ್ಟು, ೨೦೦೪.೦೫ ರ ಶೇ. ೫.೧೫ ರಷ್ಟು ಪ್ರಮಾಣದಲ್ಲಿ ಇಳಿಕೆಯಾದರೆ, ೨೦೦೫-೦೬ ಕ್ಕೆ ಹೋಲಿಸಿದಾಗ ಯಾವುದೇ ಬದಲಾವಣೆ ಕಾಣದು.

೭) ೨೦೦೭-೦೮ ರಲ್ಲಿ ದಲ್ಲಾಲರ ಸಂಖ್ಯೆ ಅತೀ ಕಡಿಮೆ ೮೬ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೪.೮೫, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೧೩.೧೩ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದಾಗ ಶೇ. ೫.೪೯, ೨೦೦೩-೦೪ ಕ್ಕೆ ಶೇ. ೮.೫೧ ರಷ್ಟು, ೨೦೦೪-೦೫ ಕ್ಕೆ ಶೇ. ೧೧.೩೪ ರಷ್ಟು, ೨೦೦೫-೦೬ ಕ್ಕೆ ಶೇ. ೬.೫೨ ರಷ್ಟು ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೬.೫೨ ರಷ್ಟು ಇಳಿಕೆಯನ್ನು ತೋರಿಸುತ್ತದೆ.

ಹೀಗೆ ಒಟ್ಟಿನಲ್ಲಿ ಇಳಿಕೆಯ ಧೋರಣೆಯನ್ನು ಹೊಂದಿದೆ.

**೨) ಖರೀದಿದಾರರು :** ೨೦೦೦-೦೧ ರಿಂದ ೨೦೦೭-೦೮ ರವರೆಗೆ ಪರೀಕ್ಷಿಸಲಾಗಿ ಏರಿ-ಇಳಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ. ಈ ಏರಿಳಿಕೆಯ ದರ ಇಂತಿದೆ. ೨೦೦೦-೦೧ ಆಧಾರ ವರ್ಷದಲ್ಲಿ ೧೧೫ ಜನ ಖರೀದಿದಾರರಿದ್ದರು.

೧) ೨೦೦೧-೦೨ ರಲ್ಲಿ ಖರೀದಿದಾರರ ಸಂಖ್ಯೆ ೧೨೭ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದಾಗ ಶೇ. ೧೦.೪೩ ರಷ್ಟು ಏರಿಕೆಯಾಗಿರುವದು ಕಂಡುಬರುತ್ತದೆ.

೨) ೨೦೦೨-೦೩ ರಲ್ಲಿ ಖರೀದಿದಾರರ ಸಂಖ್ಯೆ ೧೦೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೫.೨೨ ರಷ್ಟು ಮತ್ತು ೨೦೦೨-೦೩ ರ ಶೇ. ೧೪.೧೭ ರಷ್ಟು ಇಳಿಕೆಯಾಗಿರುವದನ್ನು ಕಾಣುತ್ತೇವೆ. ಇದು ಅಧ್ಯಯನದ ಅವಧಿಯಲ್ಲಿ ಅತೀ ಕಡಿಮೆ ಸಂಖ್ಯೆ.

೩) ೨೦೦೩-೦೪ ರಲ್ಲಿ ಖರೀದಿದಾರರ ಸಂಖ್ಯೆ ೧೧೮ ಇರುತ್ತದೆ. ಇದು ೨೦೦೦-೦೧ ರಕ್ಕಿಂತ ಶೇ. ೨.೬೧ ರಷ್ಟು ಮತ್ತು ೨೦೦೨-೦೩ ರಕ್ಕಿಂತ ಶೇ. ೮.೨೬ ರಷ್ಟು ಪ್ರಮಾಣದಲ್ಲಿ ಏರಿಕೆಯನ್ನು ಮತ್ತು ೨೦೦೧-೦೨ ರ ಶೇ. ೭.೦೯ ರಷ್ಟು ಇಳಿಕೆಯನ್ನು ತೋರಿಸುತ್ತದೆ.

೪) ೨೦೦೪-೦೫ ರಲ್ಲಿ ಖರೀದಿದಾರರ ಸಂಖ್ಯೆ ೧೧೫ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಯಾವುದೇ ಬದಲಾವಣೆ ಇಲ್ಲ. ಆದರೆ ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೯.೪೫, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೨.೫೪ ರಷ್ಟು ಇಳಿಕೆಯನ್ನು ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೫.೫೦ ರಷ್ಟು ಏರಿಕೆಯನ್ನು ತೋರಿಸುತ್ತದೆ.

೫) ೨೦೦೫-೦೬ ರಲ್ಲಿ ಖರೀದಿದಾರರ ಸಂಖ್ಯೆ ೧೩೩ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೫.೬೫, ೨೦೦೧-೦೨ ಕ್ಕೆ ಶೇ. ೪.೭೨, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೨೨.೦೧, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧೨.೭೧ ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ೧೫.೬೫ ರಷ್ಟು ಪ್ರಮಾಣದಲ್ಲಿ ಏರಿಕೆಯನ್ನು ತೋರಿಸುತ್ತದೆ.

೬) ೨೦೦೬-೦೭ ರಲ್ಲಿ ಖರೀದಿದಾರರ ಸಂಖ್ಯೆ ೧೩೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೨೦.೮೭ ರಷ್ಟು , ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೦೯.೪೫, ೨೦೦೨-೦೩ ಕ್ಕೆ ಹೋಲಿಸಿದರೆ ೨೭.೫೨ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧೭.೭೯ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೨೦.೮೭ ರಷ್ಟು ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ಶೇ. ೦೪.೫೧ ರಷ್ಟು ಏರಿಕೆಯಾಗಿದೆ. ಖರೀದಿದಾರರ ಸಂಖ್ಯೆ ೧೩೯ (೨೦೦೬-೦೭) ಅಧ್ಯಯನದ ಅವಧಿಯಲ್ಲಿಯೇ ಅತೀ ಹೆಚ್ಚಿನ ಸಂಖ್ಯೆಯಾಗಿರುತ್ತದೆ. ೨೦೦೭-೦೮ ರಲ್ಲಿ ಸಂಖ್ಯೆಯು ೧೧೭ ಕ್ಕೆ ಕುಸಿದಿದೆ.

೭) ೨೦೦೭-೦೮ ರಲ್ಲಿ ಖರೀದಿದಾರ ಸಂಖ್ಯೆ ೧೧೭ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೦೧.೭೪ ರಷ್ಟು ಏರಿಕೆಯನ್ನು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೭.೮೭ ರಷ್ಟು ಇಳಿಕೆಯನ್ನು, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೭.೩೪ ರಷ್ಟು ಏರಿಕೆಯನ್ನು, ೨೦೦೩-೦೪

ಕ್ಕೆ ಹೋಲಿಸಿದರೆ ಶೇ. ೦.೮೫ ರಷ್ಟು ಇಳಿಕೆಯನ್ನು, ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೦೧.೭೪ ರಷ್ಟು ಏರಿಕೆಯನ್ನು, ೨೦೦೫-೦೬ ಕ್ಕೆ ಹೋಲಿಸಿದರೆ ಶೇ. ೧೨.೦೩ ರಷ್ಟು ಹಾಗೂ ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೧೫.೮೩ ರಷ್ಟು ಇಳಿಕೆಯಾಗಿದೆ.

ಹೀಗೆ ಖರೀದಿದಾರರ ಸಂಖ್ಯೆಯು ಅಧ್ಯಯನದ ಅವಧಿಯಲ್ಲಿ ಏಕರೂಪವಾಗಿರದೆ ಏರಿಕೆ - ಇಳಿಕೆಯ ಪ್ರವೃತ್ತಿಯನ್ನು ಕಾಣಲಾಗುತ್ತದೆ.

**೩) ಆಮದುದಾರರು :** ಆಮದುದಾರರು ಮುಖ್ಯ ಪೇಟೆಯ ಕಾರ್ಯಕರ್ತರಲ್ಲಿ ಒಬ್ಬರಾಗಿದ್ದು, ಅವರ ಬೆಳವಣಿಗೆಯ ಏರಿಕೆಯ ಸ್ವರೂಪವನ್ನು ಅಧ್ಯಯನದ ಅವಧಿಯಲ್ಲಿ ಕಾಣುತ್ತೇವೆ. ೨೦೦೦-೦೧ ರಲ್ಲಿ ಕೇವಲ ೧೬ ಜನರಿಂದ ೨೦೦೭-೦೮ ರಲ್ಲಿ ೨೮ ಜನ ಆಮದುದಾರರು ವ್ಯವಹರಿಸುತ್ತಿರುವದನ್ನು ಮತ್ತು ಏರಿಕೆಯ ಪ್ರವೃತ್ತಿಯನ್ನು ಇಂತೆ ವಿವರಿಸಲಾಗಿದೆ.

೧) ೨೦೦೧-೦೨ ರಲ್ಲಿ ಆಮದುದಾರರ ಸಂಖ್ಯೆ ೧೮ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೨.೫೦ ರಷ್ಟು ಏರಿಕೆ ಕಾಣುತ್ತೇವೆ.

೨) ೨೦೦೨-೦೩ ರಲ್ಲಿ ಆಮದುದಾರರ ಸಂಖ್ಯೆ ೧೮ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೨.೫೦ ರಷ್ಟು ಏರಿಕೆ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಯಾವುದೇ ಬದಲಾವಣೆ ಇಲ್ಲದಿರುವುದನ್ನು ತೋರಿಸುತ್ತದೆ.

೩) ೨೦೦೩-೦೪ ರಲ್ಲಿ ಆಮದುದಾರರ ಸಂಖ್ಯೆ ೨೮ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೭೫ ರಷ್ಟು ಹಾಗೂ ೨೦೦೧ ರಿಂದ ೨೦೦೩ ಕ್ಕೆ ಹೋಲಿಸಿದರೆ ೫೫.೫೬ ರಷ್ಟು ಏರಿಕೆಯಾಗಿರುವದನ್ನು ಕಾಣುತ್ತೇವೆ.

೪) ೨೦೦೪-೦೫ ರಲ್ಲಿ ಆಮದುದಾರರ ಸಂಖ್ಯೆ ೨೮ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೭೫ ರಷ್ಟು ಮತ್ತು ೨೦೦೧-೦೨, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೫೫.೫೬ ರಷ್ಟು ಪ್ರಮಾಣದ ಏರಿಕೆಯನ್ನು ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ಯಾವುದೇ ಬದಲಾವಣೆ ಇಲ್ಲ.

೫) ೨೦೦೫-೦೬ ರಲ್ಲಿ ಆಮದುದಾರರ ಸಂಖ್ಯೆ ೨೯ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೮೧.೨೫ ರಷ್ಟು , ೨೦೦೧-೦೨, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೬೧.೧೧ ರಷ್ಟು ಮತ್ತು ೨೦೦೩-೦೪ ಹಾಗೂ ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೦೩.೫೭ ರಷ್ಟು ಏರಿಕೆಯಾಗಿರುವದನ್ನು ಕಾಣುತ್ತೇವೆ.

೬) ೨೦೦೬-೦೭ ಕ್ಕೆ ಆಮದುದಾರರ ಸಂಖ್ಯೆ ೨೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೮೧.೨೫ ರಷ್ಟು, ೨೦೦೧-೦೨ ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೬೧.೧೧ ರಷ್ಟು ಮತ್ತು ೨೦೦೩-೦೪ ಹಾಗೂ ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೦೩.೫೭ ರಷ್ಟು ಏರಿಕೆಯನ್ನು ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ಯಾವುದೇ ಬದಲಾವಣೆಯಾಗದಿರುವದನ್ನು ಕಾಣುತ್ತೇವೆ.

೭) ೨೦೦೭-೦೮ ರಲ್ಲಿ ಆಮದುದಾರರ ಸಂಖ್ಯೆ ೨೮ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೭೫ ರಷ್ಟು ಏರಿಕೆಯನ್ನು ಹಾಗೂ ೨೦೦೧-೦೨ ಮತ್ತು ೨೦೦೨-೦೩ ಕ್ಕೆ ಶೇ. ೫೫.೫೬ ರಷ್ಟು, ೨೦೦೩-೦೪ ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ಬದಲಾವಣೆ ಇಲ್ಲದಿರುವದು, ೨೦೦೫-೦೬ ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೩.೪೫ ರಷ್ಟು ಪ್ರಮಾಣದಲ್ಲಿ ಇಳಿಕೆಯು ಕಂಡುಬರುತ್ತದೆ.

ಹೀಗೆ ಪ್ರಾಥಮಿಕ ೭ ವರ್ಷಗಳಲ್ಲಿ ಏರಿಕೆಯಾಗಿದ್ದು, ೨೦೦೭-೦೮ ರಲ್ಲಿ ಹಿಂದಿನ ವರ್ಷಕ್ಕಿಂತ ಇಳಿಕೆಯಾಗಿರುವದನ್ನು ಕಾಣುತ್ತೇವೆ.

**೪) ರಫ್ತುದಾರರು :** ರಫ್ತುದಾರರು ಪೇಟೆಯ ಕಾರ್ಯಕರ್ತರಲ್ಲಿ ಒಬ್ಬರು. ಇವರ ಸಂಖ್ಯೆಯು ಪ್ರಥಮ ವರ್ಷದಲ್ಲಿ ೯೬ ಇದ್ದು, ದ್ವಿತೀಯ ವರ್ಷದಲ್ಲಿ ೧೨೩ ಕ್ಕೆ ಏರಿಕೆಯಾಗಿ, ತೃತೀಯರಿಂದ ಪಂಚ ವರ್ಷಗಳಲ್ಲಿ ನಿರಂತರ ಇಳಿಕೆಯನ್ನು ಹಾಗೂ ಆರನೆಯ ವರ್ಷದಲ್ಲಿ ಏರಿಕೆ ಮುಂದೆ ಏಳು ಮತ್ತು ಎಂಟನೇಯ ವರ್ಷದಲ್ಲಿ ಇಳಿಕೆಯಾಗಿರುವದು ಕಾಣುತ್ತದೆ. ಇವರ ಬೆಳವಣಿಗೆ ದರ ಇಂತಿದೆ.

೧) ೨೦೦೧-೦೨ ಕ್ಕೆ ರಫ್ತುದಾರರ ಸಂಖ್ಯೆ ೧೨೩ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೨೮.೧೩ ರಷ್ಟು ಏರಿಕೆಯಾಗಿದೆ.

೨) ೨೦೦೨-೦೩ ಕ್ಕೆ ಇವರ ಸಂಖ್ಯೆ ೧೧೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೨೩.೯೬ ರಷ್ಟು ಏರಿಕೆಯನ್ನು ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೩.೫೨ ರಷ್ಟು ಇಳಿಕೆಯಾಗಿದೆ.

೩) ೨೦೦೩-೦೪ ಕ್ಕೆ ಇವರ ಸಂಖ್ಯೆ ೧೧೫ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೯.೭೯ ರಷ್ಟು ಏರಿಕೆಯನ್ನು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೬.೫೦ ರಷ್ಟು ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೩.೩೬ ರಷ್ಟು ಇಳಿಕೆಯಾಗಿದೆ.

೪) ೨೦೦೪-೦೫ ಕ್ಕೆ ರಫ್ತುದಾರರ ಸಂಖ್ಯೆ ೧೧೩ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೭.೭೧ ರಷ್ಟು ಏರಿಕೆಯನ್ನು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೮.೧೩ ರಷ್ಟು, ೨೦೦೨-೦೩ ಕ್ಕೆ ಶೇ. ೫.೦೪ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧.೭೪ ರಷ್ಟು ಇಳಿಕೆಯಾಗಿದೆ.

೫) ೨೦೦೫-೦೬ ರಲ್ಲಿ ರಫ್ತುದಾರರ ಸಂಖ್ಯೆ ೧೨೯ ಇರುತ್ತದೆ. ಇದನ್ನು ೨೦೦೦-೦೧ ರಿಂದ ೨೦೦೪-೦೫ ಕ್ಕೆ ಹೋಲಿಸಿದರೆ ಕ್ರಮವಾಗಿ ಶೇ. ೩೪.೩೮, ಶೇ. ೦೪-೮೮, ಶೇ. ೦೮.೪೦, ಶೇ. ೧೨.೧೭, ಶೇ. ೧೪.೧೬ ರಷ್ಟು ಏರಿಕೆಯಾಗಿದೆ.

೬) ೨೦೦೬-೦೭ ರಲ್ಲಿ ರಫ್ತುದಾರರ ಸಂಖ್ಯೆ ೧೨೮ ಇರುತ್ತದೆ. ಇದನ್ನು ೨೦೦೦-೦೧ ರಿಂದ ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೩೩.೩೩, ಶೇ. ೦೪.೦೭, ಶೇ. ೭.೫೬, ಶೇ. ೧೧.೩೦, ಶೇ. ೧೩.೨೭ ರಷ್ಟು ಏರಿಕೆ ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ಶೇ. ೦.೭೮ ರಷ್ಟು ಇಳಿಕೆಯಾಗಿದೆ.

೭) ೨೦೦೭-೦೮ ರಲ್ಲಿ ರಫ್ತುದಾರರ ಸಂಖ್ಯೆ ೧೧೬ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೨೦.೮೩ ರಷ್ಟು ಏರಿಕೆ, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫.೬೯, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೩.೫೨ ರಷ್ಟು ಇಳಿಕೆಯನ್ನು, ೨೦೦೩-೦೪ ಕ್ಕೆ ಹೋಲಿಸಿದರೆ ೦.೮೭ ಏರಿಕೆಯಾಗಿದೆ. ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೨.೬೫ ಏರಿಕೆ, ೨೦೦೫-೦೬ ಕ್ಕೆ ಹೋಲಿಸಿದರೆ ಶೇ. ೧೦.೦೮ ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೯.೩೮ ರಷ್ಟು ಇಳಿಕೆಯಾಗಿದೆ.

ಹೀಗೆ ರಫ್ತುದಾರರ ಬೆಳವಣಿಗೆಯ ಪ್ರವೃತ್ತಿಯು ಅಧ್ಯಯನದ ಅವಧಿಯಲ್ಲಿ ಏರಿಕೆ ಮತ್ತು ಇಳಿಕೆಯ ಧೋರಣೆ ಹೊಂದಿರುವದು ಕಂಡುಬರುತ್ತದೆ.

**೫) ದಾಸ್ತಾನುಗಾರರು :** ೨೦೦೦-೦೧ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೬೭ ಇದ್ದು, ೨೦೦೭-೦೮ ರ ವೇಳೆಗೆ ಅದು ೧೫೯ ಇರುವದನ್ನು ಮೇಲಿನ ಕೋಷ್ಟಕದಿಂದ ಕಾಣಬಹುದು. ೨೦೦೦-೦೧ ರಿಂದ ೨೦೦೭-೦೮ ರವರೆಗಿನ ಬೆಳವಣಿಗೆಯದರ ಇಂತಿದೆ :

೧) ೨೦೦೧-೦೨ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೭೫ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೦೪.೭೯ ರಷ್ಟು ಏರಿಕೆಯಾಗಿದೆ.

೨) ೨೦೦೨-೦೩ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೫೪ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೭.೭೮, ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೧೨ ರಷ್ಟು ಇಳಿಕೆಯಾಗಿದೆ.

೩) ೨೦೦೩-೦೪ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೬೬ ಇರುತ್ತದೆ. ಇದನ್ನೇ ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೦.೬೦, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫.೧೪ ರಷ್ಟು ಇಳಿಕೆ ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೦೭.೭೯ ರಷ್ಟು ಏರಿಕೆಯಾಗಿದೆ.

೪) ೨೦೦೪-೦೫ ರಲ್ಲಿ ರಫ್ತುದಾರರ ಸಂಖ್ಯೆ ೧೬೪ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧.೮೦, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೬.೨೯ ರಷ್ಟು ಇಳಿಕೆ, ೨೦೦೨-೦೩ ಕ್ಕೆ ಹೋಲಿಸಿದರೆ ೦೬.೪೯ ಏರಿಕೆಯನ್ನು ಮತ್ತೆ ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧.೨೦ ರಷ್ಟು ಇಳಿಕೆಯಾಗಿರುವದು.

೫) ೨೦೦೫-೦೬ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೭೩ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ೩.೫೯ ರಷ್ಟು ಏರಿಕೆ, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೧.೧೪ ರಷ್ಟು ಇಳಿಕೆ, ೨೦೦೨-೦೩ ಕ್ಕೆ ಹೋಲಿಸಿದರೆ ೧೨.೩೩, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೪.೨೨, ೨೦೦೪-೦೫ ಕ್ಕೆ ಹೋಲಿಸಿದರೆ ೫.೪೯ ರಷ್ಟು ಏರಿಕೆಯಾಗಿದೆ.

೬) ೨೦೦೬-೦೭ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೬೪ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಶೇ. ೧.೮೦, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೬.೨೯ ರಷ್ಟು ಇಳಿಕೆ, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೦೬.೪೯ ಏರಿಕೆ, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧.೨೦ ರಷ್ಟು ಇಳಿಕೆ. ೨೦೦೪-೦೫ ಕ್ಕೆ ಹೋಲಿಸಿದರೆ ಯಾವುದೇ ಬದಲಾವಣೆ ಇಲ್ಲ, ೨೦೦೫-೦೬ಕ್ಕೆ ಹೋಲಿಸಿದರೆ ಶೇ. ೫.೨೦ ರಷ್ಟು ಇಳಿಕೆಯಾಗಿದೆ.

೭) ೨೦೦೭-೦೮ ರಲ್ಲಿ ದಾಸ್ತಾನುಗಾರರ ಸಂಖ್ಯೆ ೧೫೯ ಇರುತ್ತದೆ. ಇದನ್ನು ೨೦೦೨-೦೩ ಕ್ಕೆ ಹೋಲಿಸಿದಾಗ ಶೇ. ೦೩.೨೫ ರಷ್ಟು ಏರಿಕೆಯನ್ನು ನೋಡುತ್ತೇವೆ. ಆದರೆ ೨೦೦೦-೦೧ ಕ್ಕೆ ಶೇ. ೪.೭೯, ೨೦೦೧-೦೨ ಕ್ಕೆ ಶೇ. ೯.೧೪, ೨೦೦೩-೦೪ ಕ್ಕೆ ಶೇ. ೪.೨೨, ೨೦೦೪-೦೫ ಕ್ಕೆ ಶೇ. ೩.೦೫, ೨೦೦೫-೦೬ ಕ್ಕೆ ಶೇ. ೮.೦೯ ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೩.೦೫ ರಷ್ಟು ಇಳಿಕೆಯಾಗಿದೆ.

ಹೀಗೆ ದಾಸ್ತಾನುಗಾರರ ಬೆಳವಣಿಗೆಯ ಏರಿಕೆಯ ಮತ್ತು ಇಳಿಕೆಯ ಪ್ರವೃತ್ತಿಯನ್ನು ಹೊಂದಿರುವದು ಕಂಡುಬರುತ್ತದೆ.

**೬) ಹಮಾಲರು :** ಹಮಾಲರ ಸಂಖ್ಯೆಯಲ್ಲಿ ಬಹಳ ವ್ಯತ್ಯಾಸತೆಯನ್ನು ಕಾಣುತ್ತೇವೆ. ೨೦೦೦-೦೧ ರಲ್ಲಿ ಅವರ ಸಂಖ್ಯೆ ೧೧೮ ಇದೆ. ಅಧ್ಯಯನದ ಅವಧಿಯಲ್ಲಿ ಅವರ ಗರಿಷ್ಠ ಸಂಖ್ಯೆ ೩೫೬, ೨೦೦೬-೦೭ ಕ್ಕೆ ಇದರ ಕನಿಷ್ಠ ಸಂಖ್ಯೆ ೧೧೮, ೨೦೦೦-೦೧ ಕ್ಕೆ ಇದೆ. ಇವರ ಬೆಳವಣಿಗೆಯ ಪ್ರವೃತ್ತಿಯು ಇಂತಿದೆ.

೧) ೨೦೦೧-೦೨ ರಲ್ಲಿ ಹಮಾಲರ ಸಂಖ್ಯೆ ೩೨೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೭೮.೮೧ ರಷ್ಟು ಏರಿಕೆಯಾಗಿದೆ.

೨) ೨೦೦೨-೦೩ ರಲ್ಲಿ ಹಮಾಲರ ಸಂಖ್ಯೆ ೧೬೧ ಇರುತ್ತದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೩೬.೪೪ ಏರಿಕೆ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫೧.೦೬ ರಷ್ಟು ಇಳಿಕೆಯಾಗಿದೆ.

೩) ೨೦೦೩-೦೪ ರಲ್ಲಿ ಹಮಾಲರ ಸಂಖ್ಯೆ ೧೪೪ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ೨೨.೦೩ ರಷ್ಟು ಏರಿಕೆ, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫೬.೨೩ ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೧೦.೫೬ ರಷ್ಟು ಇಳಿಕೆಯಾಗಿದೆ.

೪) ೨೦೦೪-೦೫ ರಲ್ಲಿ ಹಮಾಲರ ಸಂಖ್ಯೆ ೧೮೫ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೫೬.೭೮ ರಷ್ಟು , ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೧೪.೯೧, ೨೦೦೩-೦೪ಕ್ಕೆ ಹೋಲಿಸಿದರೆ ಶೇ. ೨೮.೪೭ ರಷ್ಟು ಏರಿಕೆ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೪೩.೭೭ ರಷ್ಟು ಇಳಿಕೆಯಾಗಿದೆ.

೫) ೨೦೦೫-೦೬ ರಲ್ಲಿ ಹಮಾಲರ ಸಂಖ್ಯೆ ೧೩೯ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೭.೮೦ ರಷ್ಟು ಏರಿಕೆ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೫೭.೭೫, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೧೩.೬೬ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೩.೪೭ ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೨೪.೮೬ ರಷ್ಟು ಇಳಿಕೆಯಾಗಿದೆ.

೬) ೨೦೦೬-೦೭ ರಲ್ಲಿ ಹಮಾಲರ ಸಂಖ್ಯೆ ೩೫೬ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೨೦೧.೭೦, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೮.೨೧, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೧೨೧.೧೨, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧೪೭-೨೨, ೨೦೦೪-೦೫

ಕ್ಕೆ ಹೋಲಿಸಿದರೆ ಶೇ. ೯೨.೪೩ ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೧೫೬.೧೨ ರಷ್ಟು ಏರಿಕೆಯಾಗಿದೆ.

೭) ೨೦೦೭-೦೮ ರಲ್ಲಿ ಹಮಾಲರ ಸಂಖ್ಯೆ ೨೫೧ ಇರುತ್ತದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೧೨.೭೧, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೫೫.೯೦, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೭೪.೩೧, ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೩೫.೬೮ ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೮೦.೫೮ ರಷ್ಟು ಏರಿಕೆಯಾಗಿದೆ. ಆದರೆ ೨೦೦೧-೦೨ ಕ್ಕೆ ಹೋಲಿಸಿದರೆ ೨೩.೭೧, ೨೦೦೬-೦೭ ಕ್ಕೆ ಹೋಲಿಸಿದರೆ ಶೇ. ೨೯.೪೯ ರಷ್ಟು ಇಳಿಕೆಯಾಗಿದೆ.

ಹೀಗೆ ಹಮಾಲರ ಬೆಳವಣಿಗೆ ದರದಲ್ಲಿ ಭಾರಿ ಏರಿಳಿತಗಳನ್ನು ಅಧ್ಯಯನದ ಅವಧಿಯಲ್ಲಿ ಕಂಡುಬರುತ್ತದೆ.

**೭) ತೂಕದವರು :** ತೂಕದವರು ಪೇಟೆಯ ಕಾರ್ಯದಲ್ಲಿ ಒಬ್ಬರು. ೨೦೦೦-೦೧ ರಿಂದ ೨೦೦೭-೦೮ ರ ಅವಧಿಯಲ್ಲಿ ಅವರ ಸಂಖ್ಯೆಯು ಕ್ರಮೇಣ ಕಡಿಮೆಯಾಗುತ್ತ ಬಂದಿದೆ. ಆದುದರಿಂದ ಅವರ ಬೆಳವಣಿಗೆದರ ಯಾವತ್ತು ಇಳಿಕೆಯನ್ನು ಅಥವಾ ಯಾವುದೇ ಬದಲಾವಣೆಯಾಗದಿರುವದನ್ನು ನೋಡಬಹುದು.

೧) ೨೦೦೧-೦೨ ರಿಂದ ೨೦೦೪-೦೫ ರವರೆಗೆ ಅವರ ಸಂಖ್ಯೆ ೨೧ ಇದೆ. ಆದುದರಿಂದ ೨೦೦೦-೦೧ ಕ್ಕೆ ಹೋಲಿಸಿದಾಗ ೮.೭೦ ಇಳಿಕೆಯಾಗಿದ್ದು ಅನ್ವಯಿಸುತ್ತದೆ. ಮತ್ತು ೨೦೦೧-೦೨ ರಿಂದ ೨೦೦೪-೦೫ ರವರೆಗೆ ಯಾವುದೇ ಬದಲಾವಣೆಯಾಗಿಲ್ಲ.

೨) ೨೦೦೫-೦೬ ರಲ್ಲಿ ತೂಕದವರ ಸಂಖ್ಯೆ ೨೦ ಇರುತ್ತದೆ. ಅದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೩.೦೪ ರಷ್ಟು ಮತ್ತು ೨೦೦೧-೦೨ ರಿಂದ ೨೦೦೪-೦೫ ರವರೆಗೆ ಶೇ. ೪.೭೬ ರಷ್ಟು ಇಳಿಕೆಯನ್ನು ತೋರಿಸುತ್ತದೆ.

೩) ೨೦೦೬-೦೭ ಮತ್ತು ೨೦೦೭-೦೮ ರಲ್ಲಿ ತೂಕದವರ ಸಂಖ್ಯೆ ೧೯ ಇದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೭.೩೯ ರಷ್ಟು, ೨೦೦೧-೦೨ ರಿಂದ ೨೦೦೪-೦೫ ರವರೆಗೆ ಶೇ. ೯.೫೨ ರಷ್ಟು ಇಳಿಕೆಯಾಗಿದೆ. ೨೦೦೭-೦೮ ಕ್ಕೆ ಹಿಂದಿನ ವರ್ಷದಲ್ಲಿ ಸಂಖ್ಯೆಯನ್ನು ತೂಕದವರಿದ್ದಾರೆ. ಅದಕ್ಕಾಗಿ ಈ ವರ್ಷ ಬದಲಾವಣೆ ಇಲ್ಲ.

ಹೀಗೆ ಪೇಟೆಕಾರ್ಯಕರ್ತನ ಬೆಳವಣಿಗೆದರ ಸ್ವಲ್ಪ ಪ್ರಮಾಣದ ಇಳಿಮುಖ ಪ್ರವೃತ್ತಿಯನ್ನು ಹೊಂದಿದೆ.

**೮) ಚಿಲ್ಲರೆ ವರ್ತಕರು :** ಸುತ್ತ - ಮುತ್ತಲಿನ ಊರುಗಳ ಪೇಟೆಯಲ್ಲಿ ವ್ಯವಹರಿಸುವದಕ್ಕಾಗಿ ತಮಗೆ ಬೇಕಾಗುವ ಉತ್ಪನ್ನಗಳನ್ನು ಕೃಷಿ ಉತ್ಪನ್ನ ಮಾರುಕಟ್ಟೆಯಿಂದ ಖರೀದಿಸುವದಕ್ಕಾಗಿ ಸಮಿತಿಯಿಂದ ನಿರ್ದಿಷ್ಟ ಶುಲ್ಕ ಭರಿಸಿ ಅನುಮತಿ ಪಡೆದ ಪೇಟೆಯ ಕಾರ್ಯಕರ್ತರಿವರು. ಇವರು ೨೦೦೦-೦೧ ರಲ್ಲಿ ಕೇವಲ ೧೭ ಜನ ಮಾತ್ರ ಇದ್ದರು. ೨೦೦೭-೦೮ ರಲ್ಲಿ ಅವರ ಸಂಖ್ಯೆ ೧೬೫ ಕ್ಕೆ ಏರಿದೆ. ಅವರ ಬೆಳವಣಿಗೆಯ ದರ ಇಂತಿದೆ.

೧) ೨೦೦೧-೦೨ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೩೪ ಇದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೦೦ ರಷ್ಟು ಏರಿಕೆಯಾಗಿದೆ.

೨) ೨೦೦೨-೦೩ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೪೮ ಇದೆ. ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೧೮೨.೨೪ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೪೧.೧೮ ರಷ್ಟು ಏರಿಕೆಯಾಗಿದೆ.

೩) ೨೦೦೩-೦೪ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೭೮ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ೩೫೮.೮೨ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೧೨೯.೪೧ ರಷ್ಟು ಮಾತ್ರ ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೬೨.೫೦ ರಷ್ಟು ಏರಿಕೆಯಾಗಿದೆ.

೪) ೨೦೦೪-೦೫ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೭೪ ಇದೆ. ಇದನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೩೫೨.೨೯, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೨೧೭.೬೫, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೫೪.೧೭ ರಷ್ಟು ಏರಿಕೆ ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೫.೧೩ ರಷ್ಟು ಇಳಿಕೆಯಾಗಿದೆ.

೫) ೨೦೦೫-೦೬ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೯೪ ಇರುತ್ತದೆ. ಇದನ್ನು ೨೦೦೦-೦೧ಕ್ಕೆ ಹೋಲಿಸಿದರೆ ಶೇ. ೪೫೨.೯೪ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೧೭೬.೪೭, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೯೫.೮೩, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೨೦.೫೧ ರಷ್ಟು ೨೦೦೪-೦೫ ಕ್ಕೆ ಹೋಲಿಸಿದರೆ ಶೇ. ೧೨೭.೦೨ ಏರಿಕೆಯಾಗಿದೆ.

೬) ೨೦೦೬-೦೭ ರಲ್ಲಿ ಮತ್ತು ೨೦೦೭-೦೮ ರಲ್ಲಿ ಚಿಲ್ಲರೆ ವರ್ತಕರ ಸಂಖ್ಯೆ ೧೬೫ ಇರುತ್ತದೆ. ಇವುಗಳನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೮೭೦.೫೮, ೨೦೦೧-೦೨ ಕ್ಕೆ ೩೮೫.೨೯, ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೨೪೩.೭೫, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೧೧೧.೫೪, ೨೦೦೪-೦೫ ಕ್ಕೆ ಹೋಲಿಸಿದರೆ, ಶೇ. ೧೨೨.೯೭ ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೭೫.೫೩ ರಷ್ಟು ಏರಿಕೆಯಾಗಿದೆ. ಆದರೆ ೨೦೦೭-೦೮ ರಲ್ಲಿ ಹಿಂದಿನ ವರ್ಷದಷ್ಟೆ ಚಿಲ್ಲರೆ ವರ್ತಕರಿರುವದರಿಂದ, ಸಂಖ್ಯೆಯು ಯಾವುದೇ ಬದಲಾವಣೆ ಇಲ್ಲ.

ಹೀಗೆ ಚಿಲ್ಲರೆ ವರ್ತಕರ ಬೆಳವಣಿಗೆ ದರ ವರ್ಷದಿಂದ ವರ್ಷಕ್ಕೆ ಏರಿಕೆಯ ಪ್ರವೃತ್ತಿ ಮತ್ತು ಕೊನೆಯ ವರ್ಷ ಯಾವುದೇ ಬದಲಾವಣೆ ಇಲ್ಲದ್ದು ಕಂಡುಬರುತ್ತದೆ.

**೪.೩ ಪೇಟಿ ಕಾರ್ಯಕರ್ತರ ಬೆಳವಣಿಗೆಯ ದರದಲ್ಲಿ ಏರಿಳಿತಕ್ಕೆ ಕಾರಣಗಳು :**

೧) ಕೃಷಿ ಉತ್ಪನ್ನಗಳ ಆವಕದ ಪ್ರಮಾಣದ ಇಳಿಕೆಯು ಪ್ರಮುಖವಾಗಿದೆ.

೨) ಬೇರೆ ಕೃಷಿ ಉತ್ಪನ್ನ ಮಾರುಕಟ್ಟೆಯ ಆಕರ್ಷಣೆ.

೩) ಬೇರೆ ಉಪ-ಕಸಬುಗಳಿಗೆ ಒಲವು.

೪) ಅನುಮತಿ ಶುಲ್ಕದಲ್ಲಿಯ ಬದಲಾವಣೆ.

೫) ಮಾರುಕಟ್ಟೆಯಲ್ಲಿಯ ವಹಿವಾಟುಗಳ ಬೆಳವಣಿಗೆಯಲ್ಲಿನ ಇಳಿಕೆಯ ಪ್ರವೃತ್ತಿ.

೬) ೨೦೦೩-೦೪ ರಿಂದ ಸತತ ಮೂರು ವರ್ಷಗಳ ಬರಗಾಲ.

**೪.೪ (ಅ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರ ಕಳೆದ ೮ ವರ್ಷಗಳಿಂದ ಆವಕಾದ ಉತ್ಪನ್ನಗಳ ಮತ್ತು ಅವುಗಳ ಮಾರಾಟದ ಮೌಲ್ಯ ತೋರಿಸುವ ಕೋಷ್ಠಕ**

(ಆವಕ ಮತ್ತು ಜಾವಕ ಮೌಲ್ಯ) ಆವಕ - ಕ್ವಿಂಟಾಲ್‌ದಲ್ಲಿ, ಮೌಲ್ಯ - ಕೋ. ರೂ.

| ಕ್ರ.ಸಂ. | ನಿಯಂತ್ರಿತ ಕೃಷಿ ಉತ್ಪನ್ನ | ೨೦೦೦-೦೧ | | ೨೦೦೧-೦೨ | | ೨೦೦೨-೨೦೦೩ | | ೨೦೦೩-೨೦೦೪ | |
|---|---|---|---|---|---|---|---|---|---|
| | | ಆವಕ | ಮೌಲ್ಯ | ಆವಕ | ಮೌಲ್ಯ | ಆವಕ | ಮೌಲ್ಯ | ಆವಕ | ಮೌಲ್ಯ |
| ೧ | ಬೆಲ್ಲ | ೬೬೯೫೩೩ | ೬೪.೮೧ | ೫೬೬೧೩೯ | ೬೪.೪೦ | ೪೬೮೧೧೪ | ೪೪.೪೪ | ೩೬೮೪೦೯ | ೩೩.೧೭ |
| ೨ | ಶೇಂಗಾ | ೩೨೭ | ೦೦.೩೭ | ೪೩೪ | ೦೦.೦೬ | ೨೩೫ | ೦೦.೦೩ | ೨೫೦ | ೦೦.೦೪ |
| ೩ | ಸಜ್ಜೆ | ೩೫೩೫ | ೦೦.೧೩೧ | ೩೩೫೭ | ೦೦.೧೩ | ೨೫೨೭ | ೦೦.೧೨ | ೨೨೪೧ | ೦೦.೧೨ |
| ೪ | ಗೋದಿ | ೨೮೦೭ | ೦೦.೧೮೭ | ೮೧೪೨ | ೦೦.೫೮ | ೩೦೯೫೭ | ೦೨.೩೭ | ೨೬೭೨೧ | ೦೨.೧೫ |
| ೫ | ಗೋವಿನಜೋಳ | ೧೩೧೯೩೭ | ೦೪.೯೯ | ೧೦೫೧೯೨ | ೦೪.೧೬ | ೬೦೯೩೮ | ೦೩.೦೨ | ೩೭೧೭೧ | ೦೧.೯೦ |
| ೬ | ಜೋಳ | ೫೨೧೭ | ೦೦.೮೨ | ೬೦೩೨ | ೦೦.೩೫ | ೬೯೬೫ | ೦೦.೪೯ | ೪೬೮೮ | ೦೦.೩೫ |
| ೭ | ಹತ್ತಿ (ಸಿಓ-೨) | ೧೬೦೮೬ | ೦೩.೩೭ | ೧೬೭೪೦ | ೦೩.೬೬ | ೧೩೪೧೩ | ೦೨.೧೩ | ೫೦೩೩ | ೦೧.೨೩ |
| ೮ | ಸೂರ್ಯಪಾನ | ೩೦೩೯ | ೦೦.೩೦ | ೧೨೭೭ | ೦೦.೧೫ | ೩೩೮೭ | ೦೦.೫೧ | ೨೨೧೫ | ೦೦.೩೮ |
| ೯ | ಸದಕ | ೨೪೯೦ | ೦೦.೧೬ | ೩೦೭೭ | ೦೦.೨೦ | ೩೬೯೯ | ೦೦.೨೩ | ೪೨೫ | ೦೦.೦೩ |
| ೧೦ | ಅರಿಷಿಣ | ೩೭೮೭ | ೦೦.೫೬ | ೨೨೫೯ | ೦೦.೩೫ | ೩೦೦೨ | ೦೦.೭೮ | ೧೮೦೩ | ೦೦.೬೦ |
| ೧೧ | ಕಡಲೆ | ೨೨ | ೦೦.೦೦೩ | -- | -- | ೨೫ | ೦೦.೦೦೩ | ೬೩ | ೦೦.೦೦೮ |
| ೧೨ | ಹೈ.ಜೋಳ | ೬೭ | ೦೦.೦೦೨ | -- | -- | ೨೪ | ೦೦.೦೦೨ | -- | -- |
| | ಒಟ್ಟು | ೮೩೮೮೪೭ | ೭೫.೩೭ | ೭೧೨೬೪೯ | ೭೪.೦೪ | ೫೯೩೨೮೬ | ೫೪.೧೩ | ೪೪೯೦೧೯ | ೩೯.೯೮ |

### ೪.೪ (ಬ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಹಾಲಿಂಗಪುರ ಕಳೆದ ೮ ವರ್ಷಗಳಿಂದ ಆವಕಾದ ಉತ್ಪನ್ನಗಳ ಮತ್ತು ಅವುಗಳ ಮಾರಾಟದ ಮೌಲ್ಯ ತೋರಿಸುವ ಕೋಷ್ಟಕ

(ಆವಕ ಮತ್ತು ಜಾವಕ ಮೌಲ್ಯ) ಆವಕ - ಕ್ವಿಂಟಾಲ್‌ದಲ್ಲಿ, ಮೌಲ್ಯ - ಕೋ. ರೂ.

| ಕ್ರ.ಸಂ. | ನಿಯಂತ್ರಿತ ಕೃಷಿ ಉತ್ಪನ್ನ | ೨೦೦೪-೦೫ | | ೨೦೦೫-೦೬ | | ೨೦೦೬-೨೦೦೭ | | ೨೦೦೭-೨೦೦೮ | |
|---|---|---|---|---|---|---|---|---|---|
| | | ಆವಕ | ಮೌಲ್ಯ | ಆವಕ | ಮೌಲ್ಯ | ಆವಕ | ಮೌಲ್ಯ | ಆವಕ | ಮೌಲ್ಯ |
| ೧ | ಬೆಲ್ಲ | ೨೦೬೩೮೬ | ೩೦.೭೭ | ೧೭೯೩೫೯ | ೨೮.೦೯ | ೧೯೩೩೧೯ | ೨೫.೮೧ | ೩೧೫೧೨೧ | ೩೧.೦೮ |
| ೨ | ಶೇಂಗಾ | ೧೭೫ | ೦೦.೦೩ | ೧೫೪ | ೦೦.೦೨ | ೭೮೧ | ೦೦.೧೩ | ೪೫೮ | ೦೦.೧೦ |
| ೩ | ಸಜ್ಜೆ | ೨೫೭೪ | ೦೦.೧೨ | ೨೭೭೩ | ೦೦.೧೩ | ೧೨೭೧ | ೦೦.೦೭೪ | ೧೯೪೬ | ೦೦.೧೧ |
| ೪ | ಗೋದಿ | ೪೪೭೮೪ | ೦೩.೫೮ | ೬೫೦೧೩ | ೦೫.೨೯ | ೨೨೧೮೮ | ೦೨.೨೦ | ೧೪೦೬೧ | ೦೧.೭೩ |
| ೫ | ಗೋವಿನಜೋಳ | ೬೧೧೧೨ | ೦೨.೮೭ | ೭೮೮೩೭ | ೦೩.೭೪ | ೮೬೩೭೬ | ೦೫.೪೦ | ೭೩೩೧೧ | ೦೪.೪೨ |
| ೬ | ಜೋಳ | ೨೦೨೮ | ೦೦.೧೮ | ೨೪೦೫ | ೦೦.೧೬ | ೯೬೪ | ೦೦.೭೬ | ೧೪೦೨ | ೦೦.೧೭ |
| ೭ | ಹತ್ತಿ (ಸಿಓ-೨) | ೯೦೮೯ | ೦೨.೧೩ | ೧೫೫೫೭ | ೦೨.೫೯ | ೧೮೯೬೬ | ೦೩.೮೧ | ೧೪೬೫೮ | ೦೩.೩೯ |
| ೮ | ಸೂರ್ಯಪಾನ | ೧೬೩೯ | ೦೦.೨೫ | ೧೯೬೩ | ೦೦.೨೯ | ೧೪೦೮ | ೦೦.೨೪ | ೪೧೫೧ | ೦೧.೦೦೫ |
| ೯ | ಸದಕ | -- | -- | ೨೧೮ | ೦೦.೦೧ | -- | -- | ೩೫೮ | ೦೦.೦೫ |
| ೧೦ | ಅರಿಷಿಣ | ೪೦೭೯ | ೦೧.೭೧ | ೭೨೦ | ೦೦.೧೭ | ೧೩೭೬ | ೦೦.೩೦೩ | ೧೬೯ | ೦೦.೦೬ |
| ೧೧ | ಕಡಲೆ | ೧೪೬ | ೦೦.೦೨ | ೩೪ | ೦೦.೦೦೫ | ೧೧ | ೦೦.೦೦೨ | ೬೦೬ | ೦೦.೧೦ |
| ೧೨ | ಹೈ.ಜೋಳ | ೩೫೪ | ೦೦.೦೨ | ೪೩೫ | ೦೦.೦೧೫ | ೩೮ | ೦೦.೦೦೨ | ೧೫ | ೦೦.೦೦೧ |
| | ಒಟ್ಟು | ೩೩೨೩೬೬ | ೪೧.೬೮ | ೩೪೭೪೬೮ | ೪೦.೫೧ | ೩೨೬೬೪೯ | ೩೮.೭೩೧ | ೪೨೬೨೫೬ | ೪೨.೧೨ |

**೪.೪ ಕೃಷಿ ಉತ್ಪನ್ನಗಳ ಆವಕ-ಜಾವಕದ ವಿಶ್ಲೇಷಣೆ :**

ಮಹಾಲಿಂಗಪುರ ಕೃಷಿ ಉತ್ಪನ್ನ ಮಾರುಕಟ್ಟೆಯ ಕ್ಷೇತ್ರದಲ್ಲಿ ಅಧ್ಯಯನದ ಪ್ರಾರಂಭದ ವರ್ಷದಲ್ಲಿ ಕೇವಲ ೧೪ ಉತ್ಪನ್ನಗಳನ್ನು ಮಾರಾಟ ಮಾಡಲು ಘೋಷಣೆಯನ್ನು ಮಾಡಲಾಗಿತ್ತು. ೨೦೦೭-೦೮ ರಲ್ಲಿ ಕರ್ನಾಟಕ ರಾಜ್ಯಾದ್ಯಂತ ಎಲ್ಲ ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ೧೧೩ ಉತ್ಪನ್ನಗಳನ್ನು ವ್ಯವಹರಿಸಲು ನಿಯಂತ್ರಣದ ಕಕ್ಷೆಗೆ ತರಲಾಗಿದೆ. ಅದರಂತೆ ಮಹಾಲಿಂಗಪುರದ ಮಾರುಕಟ್ಟೆಯ ಕ್ಷೇತ್ರದಲ್ಲಿಯೂ ೧೧೩ ಉತ್ಪನ್ನಗಳ ವಹಿವಾಟು ಮಾಡಲು ಅವಕಾಶ ನೀಡಲಾಗಿದೆ. ಆದರೆ ಮಹಾಲಿಂಗಪುರದ ಮಾರುಕಟ್ಟೆಯಲ್ಲಿ ಪ್ರಮುಖವಾಗಿ ನಾಲ್ಕು ಉತ್ಪನ್ನಗಳ ಮಾರಾಟ ನಡೆಯುತ್ತಿದೆ. ಕೃಷಿ ಉತ್ಪನ್ನ ಮಾರುಕಟ್ಟೆಯು ರಾಜ್ಯಾದ್ಯಂತ ಬೆಲ್ಲದ ಪೇಟೆಗೆ ಪ್ರಸಿದ್ಧಿಯಾಗಿದೆ. ನಾಲ್ಕು ಪ್ರಮುಖ ಉತ್ಪನ್ನಗಳ ಬೆಳವಣಿಗೆಯ ದರ ಮತ್ತು ಮಾರಾಟ ಮೌಲ್ಯಗಳ ಪ್ರಮಾಣ ಇಂತಿದೆ.

೨೦೦೦-೦೧ ರಲ್ಲಿ ಒಟ್ಟು ಆವಕಾಗಿ ಮಾರಾಟಾದ ಉತ್ಪನ್ನದ ಪ್ರಮಾಣವು ೮,೩೮,೮೪೭ ಕ್ವಿಂಟಲ್ ಇದೆ. ಅದರಲ್ಲಿ ಬೆಲ್ಲದ ಪ್ರಮಾಣವು ಶೇ. ೭೯.೮೨ ರಷ್ಟು, ಹತ್ತಿಯ ಪ್ರಮಾಣ ಶೇ. ೧.೯೨ ರಷ್ಟು, ಗೋವಿನ ಜೋಳ ಶೇ. ೧೫.೭೩ ಮತ್ತು ಅರಿಷಿಣದ ಪ್ರಮಾಣ ಶೇ. ೦.೪೫ ರಷ್ಟಿದೆ. ಹೀಗೆ ನಾಲ್ಕು ಉತ್ಪನ್ನಗಳ ಪ್ರಮಾಣವು ಒಟ್ಟು ಆವಕದ ಶೇ. ೯೭.೯೨ ರಷ್ಟಿದೆ. ಅದರಂತೆ ಮಾರಾಟದ ಮೌಲ್ಯವು ಒಟ್ಟು ೭೫.೩೭ ಕೋಟಿ ರೂಪಾಯಿಗಳಲ್ಲಿ ಬೆಲ್ಲದ ಮಾರಾಟದ ಮೌಲ್ಯದ ಪ್ರಮಾಣ ಶೇ. ೮೫.೯೯, ಹತ್ತಿ ಶೇ. ೪.೪೭, ಗೋವಿನಜೋಳ ಶೇ. ೬.೬೨ ಮತ್ತು ಅರಿಷಿಣದ ಮಾರಾಟ ಮೌಲ್ಯ ಶೇ. ೦.೭೪ ಪ್ರಮಾಣದಲ್ಲಿದ್ದು ಇವುಗಳ ಪಾಲು ಒಟ್ಟು ಮೌಲ್ಯದಲ್ಲಿ ಶೇ. ೯೭.೮೨ ರಷ್ಟಿದೆ.

೨೦೦೧-೦೨ ರಲ್ಲಿಯ ಒಟ್ಟು ಕೃಷಿ ಉತ್ಪನ್ನಗಳ ಆವಕವು ೭,೧೨,೬೪೯ ಕ್ವಿಂಟಲ್ ಇದ್ದು ಅದರಲ್ಲಿ ಬೆಲ್ಲ ಶೇ. ೭೯.೪೪, ಹತ್ತಿ ಶೇ. ೨.೩೫ ರಷ್ಟು, ಗೋವಿನಜೋಳ ಶೇ. ೧೪.೭೬ ಮತ್ತು ಅರಿಷಿಣ ಶೇ. ೦.೩೨ ರಷ್ಟು ಪ್ರಮಾಣದಲ್ಲಿದೆ. ಇವುಗಳ ಒಟ್ಟು ಪಾಲಿನಲ್ಲಿ ಶೇ. ೯೬.೮೭ ರಷ್ಟಿದೆ. ಇದೇ ಅವಧಿಯಲ್ಲಿ ಮಾರಾಟ ಮೌಲ್ಯದಲ್ಲಿ ಬೆಲ್ಲ ಶೇ. ೮೬.೯೮, ಹತ್ತಿ ಶೇ. ೪.೯೪, ಗೋವಿನಜೋಳ ಶೇ. ೫.೬೨ ಮತ್ತು ಅರಿಷಿಣ ಶೇ. ೦.೪೭ ಒಟ್ಟು ಶೇ. ೯೮.೦೧ ರಷ್ಟು ಪಾಲು ಇದೆ.

೨೦೦೨-೦೩ ರಲ್ಲಿಯ ಒಟ್ಟು ಕೃಷಿ ಉತ್ಪನ್ನದ ಆವಕವು ೫,೯೩,೨೮೬ ಕ್ವಿಂಟಲ್‌ದಲ್ಲಿ, ಬೆಲ್ಲ ಶೇ. ೭೮.೯೦, ಹತ್ತಿ ಶೇ. ೨.೨೬, ಗೋವಿನಜೋಳ ಶೇ. ೧೦.೨೭ ಮತ್ತು ಅರಿಷಿಣ ಶೇ. ೦.೫೧ ರ ಪ್ರಮಾಣದಲ್ಲಿ ಪಾಲನ್ನು ಹೊಂದಿವೆ. ಒಟ್ಟು ಈ ನಾಲ್ಕು ಉತ್ಪನ್ನಗಳ ಆವಕದ ಪಾಲು ೯೧.೯೪ ರಷ್ಟಿದೆ. ಇದೇ ಅವಧಿಯಲ್ಲಿ ಇವುಗಳ ಮಾರಾಟದ ಮೌಲ್ಯದ ಪ್ರತಿಶತ ಪ್ರಮಾಣವು ಬೆಲ್ಲ ಶೇ. ೮೨.೧೦, ಹತ್ತಿ ಶೇ. ೩.೯೪, ಗೋವಿನಜೋಳ ಶೇ. ೫.೫೮ ಮತ್ತು ಅರಿಷಿಣ ಶೇ. ೧.೪೪ ಒಟ್ಟು ೯೩.೦೬ ರಷ್ಟು ಪಾಲನ್ನು ಹೊಂದಿವೆ.

೨೦೦೩-೦೪ ರಲ್ಲಿ ಒಟ್ಟು ಕೃಷಿ ಉತ್ಪನ್ನಗಳ ಆವಕವು ೪,೪೯,೦೧೯ ಕ್ವಿಂಟಲ್‌ದಲ್ಲಿ ಬೆಲ್ಲ ಶೇ. ೮೨.೦೪, ಹತ್ತಿ ಶೇ. ೧.೧೨, ಗೋವಿನಜೋಳ ಶೇ. ೮.೨೮ ಮತ್ತು ಅರಿಷಿಣ ಶೇ. ೦.೪೦ ರಷ್ಟಿದೆ. ಇವುಗಳ ಪಾಲು ಒಟ್ಟು ಆವಕದಲ್ಲಿ ಶೇ. ೯೧.೮೪ ರಷ್ಟಿರುತ್ತದೆ. ಇದೇ ಅವಧಿಯಲ್ಲಿ ಮಾರಾಟದ ಒಟ್ಟು ಮೌಲ್ಯವು ೩೯.೯೮ ಕೋಟಿ ರೂಪಾಯಿಗಳಲ್ಲಿ ಬೆಲ್ಲವು ಶೇ. ೮೨.೯೭, ಹತ್ತಿ ಶೇ ೩.೦೮, ಗೋವಿನಜೋಳ ಶೇ. ೪.೭೫ ಮತ್ತು ಅರಿಷಿಣ ಶೇ. ೧.೫೦ ರಷ್ಟಿರುತ್ತದೆ. ಈ ನಾಲ್ಕು ಉತ್ಪನ್ನಗಳ ಮಾರಾಟದ ಮೌಲ್ಯವು ಒಟ್ಟು ಮೌಲ್ಯದ ಶೇ. ೯೨.೩೦ ರಷ್ಟಿದೆ.

೨೦೦೪-೦೫ ರ ಸಾಲಿನಲ್ಲಿ ಕೃಷಿ ಉತ್ಪನ್ನಗಳ ಒಟ್ಟು ಆವಕವು ೩,೩೨,೩೬೬ ಕ್ವಿಂಟಲ್‌ದಲ್ಲಿ ಬೆಲ್ಲ ಶೇ. ೬೨.೧೦, ಹತ್ತಿ ಶೇ. ೨.೭೩, ಗೋವಿನಜೋಳ ಶೇ. ೧೮.೩೯ ಮತ್ತು ಅರಿಷಿಣ ಶೇ. ೧.೨೩ ರ ಪ್ರಮಾಣದಲ್ಲಿದೆ. ಇವುಗಳ ಪಾಲು ಒಟ್ಟು ಆವಕದಲ್ಲಿ ಶೇ. ೮೪.೪೫ ರಷ್ಟು ಇರುತ್ತದೆ. ಇದೇ ಅವಧಿಯಲ್ಲಿ ಮಾರಾಟದ ಒಟ್ಟು ಮೌಲ್ಯವು ೪೧.೬೮ ಕೋಟಿ ರೂಪಾಯಿಗಳಷ್ಟಿದ್ದು, ಅದರಲ್ಲಿ ಬೆಲ್ಲ ಶೇ. ೭೩.೮೨, ಹತ್ತಿ ಶೇ. ೫.೧೧, ಗೋವಿನಜೋಳ ಶೇ. ೬.೪೯ ಮತ್ತು ಅರಿಷಿಣ ಶೇ. ೪.೧೦ ರಷ್ಟು ಪಾಲನ್ನು ಹೊಂದಿವೆ. ಈ ನಾಲ್ಕು ಉತ್ಪನ್ನಗಳ ಮಾರಾಟ ಮೌಲ್ಯವು ಒಟ್ಟು ಮೌಲ್ಯದ ಶೇ. ೮೯.೯೨ ರಷ್ಟಿದೆ.

೨೦೦೫-೦೬ ರ ಸಾಲಿನಲ್ಲಿ ಒಟ್ಟು ಆವಕದ ಪ್ರಮಾಣವು ೩,೪೭,೪೬೮ ಕ್ವಿಂಟಲ್‌ದಷ್ಟಿರುತ್ತದೆ. ಅದರಲ್ಲಿ ಬೆಲ್ಲ ಶೇ. ೫೧.೬೨, ಹತ್ತಿ ಶೇ. ೪.೪೮, ಗೋವಿನಜೋಳ ಶೇ. ೨೨.೬೯ ಮತ್ತು ಅರಿಷಿಣ ಶೇ. ೦.೨೧ ರಷ್ಟು ಪಾಲನ್ನು ಹೊಂದಿವೆ. ಒಟ್ಟು ಆವಕದಲ್ಲಿ ಈ ನಾಲ್ಕು ಉತ್ಪನ್ನಗಳ ಪಾಲು ಶೇ. ೭೯ ರಷ್ಟಿರುತ್ತದೆ. ಇದೇ ಅವಧಿಯಲ್ಲಿ ಒಟ್ಟು ಮಾರಾಟದ ಮೌಲ್ಯವು ೪೦.೫೧ ಕೋಟಿ ರೂಪಾಯಿಯಾಗಿರುತ್ತದೆ. ಅದರಲ್ಲಿ ಬೆಲ್ಲ ಶೇ. ೬೯.೩೪, ಹತ್ತಿ ಶೇ. ೬.೩೯, ಗೋವಿನಜೋಳ ಶೇ. ೯.೨೩ ಮತ್ತು ಅರಿಷಿಣ ಶೇ. ೦.೪೨ ರಷ್ಟು ಪ್ರಮಾಣದಲ್ಲಿ ಪಾಲು ಹೊಂದಿರುತ್ತದೆ. ಒಟ್ಟು ಶೇ. ೮೫.೩೮ ರಷ್ಟಿದೆ.

೨೦೦೬-೦೭ ರಲ್ಲಿ ಒಟ್ಟು ಉತ್ಪನ್ನದ ಆವಕವು ೩,೨೬,೬೪೯ ಕ್ವಿಂಟಲ್ ಇರುತ್ತದೆ. ಇದರಲ್ಲಿ ಬೆಲ್ಲ ಶೇ. ೫೯.೧೮, ಹತ್ತಿ ಶೇ. ೫.೮೧, ಗೋವಿನಜೋಳ ಶೇ. ೨೨.೪೪ ಮತ್ತು ಅರಿಷಿಣ ಶೇ. ೦.೪೨ ರಷ್ಟಿರುತ್ತದೆ. ಇವುಗಳ ಪಾಲು ಒಟ್ಟು ಆವಕದಲ್ಲಿ ಶೇ. ೮೭.೮೫ ಇರುತ್ತದೆ. ಇದೇ ಅವಧಿಯಲ್ಲಿ ಮಾರಾಟದ ಒಟ್ಟು ಮೌಲ್ಯವು ೩೮.೭೩೧ ಕೋಟಿ ರೂಪಾಯಿಗಳಷ್ಟಿರುತ್ತದೆ. ಅದರಲ್ಲಿ ಬೆಲ್ಲ ಶೇ. ೬೬.೬೪, ಹತ್ತಿ ಶೇ. ೯.೮೪, ಗೋವಿನಜೋಳ ಶೇ. ೧೩.೯೪ ಮತ್ತು ಅರಿಷಿಣ ಶೇ. ೦.೭೮ ರ ಪ್ರಮಾಣದಲ್ಲಿ ಪಾಲನ್ನು ಹೊಂದಿವೆ. ಈ ನಾಲ್ಕು ಉತ್ಪನ್ನಗಳು ಒಟ್ಟು ಮಾರಾಟ ಮೌಲ್ಯದ ಶೇ. ೯೧.೨೦ ರಷ್ಟು ಪಾಲನ್ನು ಹೊಂದಿವೆ.

೨೦೦೭-೦೮ ರ ಸಾಲಿನಲ್ಲಿ ಒಟ್ಟು ಆವಕಾದ ಉತ್ಪನ್ನಗಳ ಪ್ರಮಾಣ ೪,೨೬,೨೫೬ ಕ್ವಿಂಟಲ್‌ದಷ್ಟು ಇರುತ್ತದೆ. ಇದರಲ್ಲಿ ಬೆಲ್ಲದ ಪ್ರಮಾಣ ಶೇ. ೭೩.೯೩, ಹತ್ತಿ ಶೇ. ೩.೪೪, ಗೋವಿನಜೋಳ ಶೇ. ೧೭.೨೦ ಮತ್ತು ಅರಿಷಿಣ ಶೇ. ೦.೦೪ ರ ಪ್ರಮಾಣದಲ್ಲಿ ಒಟ್ಟು ಆವಕದ

ಶೇ. ೯೪.೬೧ ಪ್ರಮಾಣದ ಪಾಲನ್ನು ಹೊಂದಿವೆ. ಇದೇ ಅವಧಿಯಲ್ಲಿ ಒಟ್ಟು ಮಾರಾಟದ ಮೌಲ್ಯವು ೪೨.೧೨ ಕೋಟಿ ರೂಪಾಯಿಗಳಷ್ಟಿರುತ್ತದೆ. ಅದರಲ್ಲಿ ಬೆಲ್ಲ ಶೇ. ೭೩.೭೯, ಹತ್ತಿ ಶೇ. ೮.೦೫, ಗೋವಿನಜೋಳ ಶೇ. ೧೦.೪೯ ಮತ್ತು ಅರಿಷಿಣ ಶೇ. ೦.೧೪ ರಷ್ಟು ಪಾಲನ್ನು ಹೊಂದಿವೆ. ಇವುಗಳು ಒಟ್ಟು ಮಾರಾಟದ ಮೌಲ್ಯದಲ್ಲಿ ಶೇ. ೯೨.೪೨ ರಷ್ಟಿರುತ್ತದೆ.

ಮೇಲಿನ ವಿಶ್ಲೇಷಣೆಯಿಂದ ತಿಳಿದು ಬರುವದೇನೆಂದರೆ;

೧) ಬೆಲ್ಲದ ಆವಕವು ೨೦೦೦-೦೧ ರಲ್ಲಿ ೬,೭೯,೫೩೩ ಕ್ವಿಂಟಲ್ ಇದ್ದು, ೨೦೦೫-೦೬ ರವರೆಗೆ ಅದರ ಪ್ರಮಾಣವು ಹಂತ ಹಂತವಾಗಿ ಇಳಿಕೆಯಾಗಿರುತ್ತದೆ. ಮತ್ತು ೨೦೦೬-೦೭ ರಲ್ಲಿ ಮತ್ತೆ ಚೇತರಿಕೆ ಕಂಡುಬರುತ್ತದೆ. ಆದರೆ ೨೦೦೭-೦೮ ರಲ್ಲಿ ಹಿಂದಿನ ವರ್ಷಕ್ಕೆ ಹೋಲಿಸಿದರೆ ೪೩,೯೪೧ ಕ್ವಿಂಟಲ್‌ದಷ್ಟು ಮತ್ತೆ ಇಳಿಕೆಯಾಗಿದೆ.

೨) ಒಟ್ಟು ಆವಕದಲ್ಲಿ ಬೆಲ್ಲದ ಶೇಕಡಾ ಪಾಲು ೨೦೦೦-೦೧ ರಲ್ಲಿ ೭೯.೮೨, ೨೦೦೧-೦೨ರಲ್ಲಿ ೭೯.೪೪, ೨೦೦೨-೦೩ ರಲ್ಲಿ ೭೮.೯೦, ೨೦೦೩-೦೪ ರಲ್ಲಿ ೮೨.೦೪ (ಸ್ವಲ್ಪ ಚೇತರಿಕೆ), ೨೦೦೪-೦೫ ರಲ್ಲಿ ೬೨.೧೦, ೨೦೦೫-೦೬ ರಲ್ಲಿ ೫೧.೬೨ ಮತ್ತು ೨೦೦೬-೦೭ ರಲ್ಲಿ ೫೮.೧೮ ಹಾಗೂ ೨೦೦೭-೦೮ ರಲ್ಲಿ ೭೩.೯೩ ಹೀಗೆ ಏರಿಳಿಕೆಯ ಪ್ರವೃತ್ತಿಯನ್ನು ಹೊಂದಿದೆ.

೩) ಒಟ್ಟು ಮಾರಾಟದ ಮೌಲ್ಯದಲ್ಲಿ ಶೇಕಡಾವಾರು ಪಾಲಿನಲ್ಲಿಯೂ ಏಕರೂಪತೆಯಿಲ್ಲ. ೨೦೦೦-೦೧ ರಲ್ಲಿ ಶೇ. ೭೫.೩೭, ೨೦೦೧-೦೨ ರಲ್ಲಿ ಶೇ. ೮೬.೯೮, ೨೦೦೨-೦೩ ರಲ್ಲಿ ಶೇ. ೮೨.೧೦, ೨೦೦೩-೦೪ ರಲ್ಲಿ ಶೇ. ೮೨.೯೭, ೨೦೦೪-೦೫ ರಲ್ಲಿ ಶೇ. ೭೩.೮೨, ೨೦೦೫-೦೬ ರಲ್ಲಿ ಶೇ. ೬೯.೩೪, ೨೦೦೬-೦೭ ರಲ್ಲಿ ಶೇ. ೬೬.೬೪ ಮತ್ತು ೨೦೦೭-೦೮ ರಲ್ಲಿ ಶೇ. ೭೩.೭೯ ರಷ್ಟಿದೆ. ಹೀಗೆ ಮೌಲ್ಯದ ಪಾಲಿನಲ್ಲಿ ಏರಿಳಿತವನ್ನು ಕಂಡುಕೊಳ್ಳಲಾಗಿದೆ.

೪) ಹತ್ತಿ (ಸಿಓ-೨) ಆವಕವು ೨೦೦೦-೦೧ ರಲ್ಲಿ ೧೬,೦೮೬ ಕ್ವಿಂಟಲ್, ೨೦೦೧-೦೨ ರಲ್ಲಿ ೧೬,೭೪೦ ಕ್ವಿಂಟಲ್ ಇದ್ದು, ೨೦೦೩-೦೪ ರವರೆಗೆ ಇಳಿಕೆಯ ಧೋರಣೆಯನ್ನು ಹಾಗೂ ೨೦೦೪-೦೫ ರಿಂದ ೨೦೦೬-೦೭ ರವರೆಗೆ ಏರಿಕೆಯ ಧೋರಣೆಯನ್ನು ಹೊಂದಿದ್ದು, ೨೦೦೭-೦೮ ರಲ್ಲಿ ಆವಕದ ಪ್ರಮಾಣ ಹಿಂದಿನ ವರ್ಷಕ್ಕಿಂತ ೪,೩೦೮ ಕ್ವಿಂಟಲ್ ಇಳಿಕೆಯಾಗಿದೆ. ಅದರ ಆವಕದ ಪ್ರಮಾಣವು ೧೪,೬೫೮ ಕ್ವಿಂಟಲ್ ಇದೆ.

೫) ಒಟ್ಟು ಆವಕದಲ್ಲಿ ಹತ್ತಿಯ ಆವಕದ ಶೇಕಡಾವಾರು ಪಾಲು ೨೦೦೦-೦೧ ರಲ್ಲಿ ಶೇ. ೧.೯೨ ರಷ್ಟು ಇದ್ದು, ಅತಿ ಹೆಚ್ಚೆಂದರೆ ೨೦೦೬-೦೭ ರಲ್ಲಿ ಶೇ. ೫.೮೧ ರಷ್ಟು ಪಾಲನ್ನು ಹೊಂದಿರುವದು ಕಂಡುಬರುತ್ತದೆ. ಆದರೆ ೨೦೦೭-೦೮ ರಲ್ಲಿ ಹತ್ತಿಯ ಶೇಕಡಾವಾರು ಆವಕದ ಪ್ರಮಾಣದಲ್ಲಿಯ ಪಾಲು ಶೇ. ೩.೪೪ ರಷ್ಟು ಇತ್ತು.

೬) ಒಟ್ಟು ಮಾರಾಟದ ಮೌಲ್ಯದಲ್ಲಿ ಹತ್ತಿಯ ಶೇಕಡಾವಾರು ಪಾಲು ೨೦೦೦-೦೧ ರಿಂದ ೨೦೦೭-೦೮ ರವರೆಗೆ ಕ್ರಮವಾಗಿ ೪.೪೭, ೪.೯೪, ೩.೯೪, ೩.೦೮, ೫.೧೧, ೬.೩೯, ೯.೮೪ ಮತ್ತು ೮.೦೫ ರಷ್ಟು ಇರುತ್ತದೆ. ಹೀಗೆ ಮಾರಾಟದ ಮೌಲ್ಯದ ಶೇಕಡಾವಾರು ಪಾಲಿನ ಪ್ರಮಾಣದಲ್ಲಿಯೂ ಏಕರೂಪತೆಯಿಲ್ಲವೆಂದು ಕಂಡುಬರುತ್ತದೆ.

೭) ಗೋವಿನ ಜೋಳದ ಆವಕವು ೨೦೦೦-೦೧ ರಲ್ಲಿ ೧,೩೧,೯೩೭ ಕ್ವಿಂಟಾಲ್ ನಷ್ಟಿದ್ದು, ೨೦೦೩-೦೪ ರಲ್ಲಿ ೩೭೧೭೧ ಕ್ವಿಂಟಾಲ್‌ನಷ್ಟಿದ್ದು, ಸತತ ಕುಸಿತದ ಧೋರಣೆಯನ್ನು ಹೊಂದಿತ್ತು. ೨೦೦೪-೦೫ ರಲ್ಲಿ ೬೧೧೧೨, ೨೦೦೫-೦೬ ಕ್ಕೆ ೭೮,೮೩೭, ೨೦೦೬-೦೭ ಕ್ಕೆ ೮೬,೩೨೬ ಕ್ವಿಂಟಾಲ್‌ಗೆ ಏರಿಕೆಯಾಗಿರುವದು ಏರಿಕೆಯ ಧೋರಣೆ ತೋರಿಸಿದರು, ೨೦೦೭-೦೮ ರಲ್ಲಿಯ ಆವಕದ ಪ್ರಮಾಣ ೭೩,೩೧೧ ಕ್ವಿಂಟಾಲ್‌ಗೆ ಇಳಿಕೆಯಾಗಿದೆ. ಹೀಗೆ ಆವಕದಲ್ಲಿ ವರ್ಷದಿಂದ ವರ್ಷಕ್ಕೆ ಇಳಿಕೆ ಮತ್ತು ಏರಿಕೆ ಧೋರಣೆ ಹೊಂದಿದೆ.

೮) ಒಟ್ಟು ಆವಕದಲ್ಲಿ ಗೋವಿನಜೋಳದ ಆವಕ ೨೦೦೦-೦೧ ರಲ್ಲಿ ಶೇ. ೧೫.೭೩, ೨೦೦೧-೦೨ ರಲ್ಲಿ ಶೇ. ೧೪.೭೬, ೨೦೦೨-೦೩ ರಲ್ಲಿ ಶೇ. ೧೦.೨೭, ೨೦೦೩-೦೪ ರಲ್ಲಿ ಶೇ. ೮.೨೮ ಹೀಗೆ ಇಳಿಕೆಯಾಗುತ್ತಾ ಬಂದಿತು. ಆದರೆ ೨೦೦೪-೦೫ ರಲ್ಲಿ ಶೇ. ೧೮.೩೯ ಕ್ಕೆ ೨೦೦೫-೦೬ ರಲ್ಲಿ ಶೇ. ೨೨.೬೯ ಮತ್ತು ೨೦೦೬-೦೭ ರಲ್ಲಿ ಶೇ. ೨೨.೪೪ ಪಾಲನ್ನು ಹೊಂದಿ ಏರಿಕೆ ಧೋರಣೆ ತೋರಿದರು, ೨೦೦೭-೦೮ ರಲ್ಲಿ ಶೇಕಡಾ ಪ್ರಮಾಣ ೧೭.೨೦ ಕ್ಕೆ ಕುಸಿತವನ್ನು ಕಂಡಾಗ, ಗೋವಿನಜೋಳದ ಪ್ರಗತಿಯ ಧೋರಣೆಯಲ್ಲಿ ಏರಿಳಿತವು ಕಂಡುಬರುತ್ತದೆ.

೯) ಒಟ್ಟು ಮಾರಾಟದ ಮೌಲ್ಯದಲ್ಲಿ ಗೋವಿನಜೋಳದ ಮಾರಾಟ ಮೌಲ್ಯದ ಶೇಕಡಾವಾರು ಪ್ರಮಾಣವು ೨೦೦೦-೦೧ ರಲ್ಲಿ ೬.೬೨, ೨೦೦೧-೦೨ ರಲ್ಲಿ ೫.೬೨, ೨೦೦೨-೦೩ ರಲ್ಲಿ ೫.೫೮ ಮತ್ತು ೨೦೦೩-೦೪ ರಲ್ಲಿ ೪.೭೫ ಕ್ಕೆ ಕುಸಿದು, ೨೦೦೪-೦೫ ರಲ್ಲಿ ಶೇ. ೬.೮೯, ೨೦೦೫-೦೬ ರಲ್ಲಿ ಶೇ. ೬.೩೯, ೨೦೦೬-೦೭ ರಲ್ಲಿ ಶೇ. ೧೩.೯೪ ಕ್ಕೆ ಏರಿತು. ಆದರೆ ೨೦೦೭-೦೮ ರಲ್ಲಿ ಶೇ. ೧೦.೪೯ ಕ್ಕೆ ಇಳಿಕೆಯಾಗಿದೆ. ಹೀಗೆ ಮಾರಾಟದ ಮೌಲ್ಯದಲ್ಲಿಯ ಶೇಕಡಾವಾರು ಪಾಲದಲ್ಲಿಯು ಏರಿಳಿತ ಇದೆ.

೧೦) ಅರಿಷಿಣದ ಆವಕವು ೨೦೦೦-೦೧ ರಲ್ಲಿ ೩೭೮೭ ಕ್ವಿಂಟಾಲ್, ೨೦೦೧-೦೨ ರಲ್ಲಿ ೨೨೫೯ ಕ್ವಿಂಟಾಲ್, ೨೦೦೨-೦೩ ರಲ್ಲಿ ೩೦೦೨ ಕ್ವಿಂಟಾಲ್, ೨೦೦೩-೦೪ ರಲ್ಲಿ ೧೮೦೩, ೨೦೦೪-೦೫ ರಲ್ಲಿ ೪೦೭೯ ಕ್ವಿಂಟಾಲ್ (ಅತಿ ಹೆಚ್ಚು), ೨೦೦೫-೦೬ ರಲ್ಲಿ ೭೨೦ ಕ್ವಿಂಟಾಲ್, ೨೦೦೬-೦೭ ಕ್ಕೆ ೧೩೭೬ ಕ್ವಿಂಟಾಲ್ ಮತ್ತು ೨೦೦೭-೦೮ ರಲ್ಲಿ ೧೬೯ (ಅತಿ ಕಡಿಮೆ) ಕ್ವಿಂಟಲ್ ಆವಕ ಆಗಿದ್ದು ಕಂಡುಬರುತ್ತದೆ. ಅರಿಷಿಣದ ಆವಕದ ಪ್ರಮಾಣದಲ್ಲಿ ಏಕರೂಪತೆ ಇಲ್ಲ.

೧೧) ಒಟ್ಟು ಆವಕದಲ್ಲಿ ಅರಿಷಿಣ ಆವಕದ ಶೇಕಡಾ ಪ್ರಮಾಣವು ೨೦೦೦-೦೧ ರಲ್ಲಿ ೦.೪೫, ೨೦೦೧-೦೨ ರಲ್ಲಿ ೦.೩೨, ೨೦೦೨-೦೩ ರಲ್ಲಿ ೦.೫೧, ೨೦೦೩-೦೪ ರಲ್ಲಿ ೦.೪೦, ೨೦೦೪-೦೫ ರಲ್ಲಿ ೧.೨೩, ೨೦೦೨-೦೩ ರಲ್ಲಿ ೦.೫೧, ೨೦೦೩-೦೪ ರಲ್ಲಿ ೦.೪೦, ೨೦೦೪-೦೫ ರಲ್ಲಿ ೧.೨೩, ೨೦೦೫-೦೬ ರಲ್ಲಿ ೦.೨೧, ೨೦೦೬-೦೭ ರಲ್ಲಿ ೦.೪೨ ಮತ್ತು ೨೦೦೭-೦೮ ರಲ್ಲಿ ೦.೦೪, ಹೀಗೆ ಇಳಿಕೆಯ ಧೋರಣೆ ಹೊಂದಿರುವದು ಕಂಡುಬರುತ್ತದೆ.

೧೨) ಅರಿಷಿಣದ ಮಾರಾಟ ಮೌಲ್ಯದ ಶೇಕಡಾ ಪ್ರಮಾಣ ೨೦೦೦-೦೧ ರಲ್ಲಿ ೦.೭೪, ೨೦೦೧-೦೨ ರಲ್ಲಿ ೦.೪೭, ೨೦೦೨-೦೩ ರಲ್ಲಿ ೧.೪೪, ೨೦೦೩-೦೪ ರಲ್ಲಿ ೧.೫೦,

೨೦೦೪-೦೫ ರಲ್ಲಿ ೪.೧೦ (ಅತೀ ಹೆಚ್ಚು), ೨೦೦೫-೦೬ ರಲ್ಲಿ ೦.೪೨, ೨೦೦೬-೦೭ ಕ್ಕೆ ೦.೭೮ ಮತ್ತು ೨೦೦೭-೦೮ ರಲ್ಲಿ ೦.೧೪ ದಷ್ಟು ಪ್ರಮಾಣದಲ್ಲಿದೆ. ಇದರಲ್ಲಿಯೂ ಏಕರೂಪತೆ ಇಲ್ಲ.

ಬೆಲ್ಲ, ಹತ್ತಿ, ಗೋವಿನಜೋಳ ಮತ್ತು ಅರಿಷಿಣದ ಆವಕ ಮತ್ತು ಮಾರಾಟದ ಮೌಲ್ಯದ ಶೇಕಡಾವಾರು ಪ್ರಮಾಣವು, ಮಾರುಕಟ್ಟೆಯ ಒಟ್ಟು ಆವಕ ಮತ್ತು ಮಾರಾಟ ಮೌಲ್ಯದ ಪ್ರಮಾಣದಲ್ಲಿಯ ಪಾಲು ಇಂತಿದೆ.

೧) ೨೦೦೦-೦೧ ರಲ್ಲಿ ನಾಲ್ಕು ಉತ್ಪನ್ನಗಳ ಆವಕದ ಶೇಕಡಾ ಪಾಲು ೯೭.೯೨ ರಷ್ಟು ಮತ್ತು ಮಾರಾಟ ಮೌಲ್ಯದ ಪಾಲು ಶೇಕಡಾ ೯೭.೮೨ ರಷ್ಟು ಇದೆ.

೨) ೨೦೦೧-೦೨ ರಲ್ಲಿಯ ಆವಕದಲ್ಲಿ ನಾಲ್ಕು ಉತ್ಪನ್ನಗಳ ಶೇಕಡಾ ಪಾಲು ೯೬.೮೭ ಮತ್ತು ಮಾರಾಟ ಮೌಲ್ಯದ ಪಾಲು ೯೮.೦೧ ರಷ್ಟು ಇದೆ.

೩) ೨೦೦೨-೦೩ ರಲ್ಲಿಯ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಶೇಕಡಾ ಪಾಲು ೯೧.೯೪ ಮತ್ತು ಮಾರಾಟ ಮೌಲ್ಯದ ಪಾಲು ೯೩.೦೬ ರಷ್ಟಿದೆ.

೪) ೨೦೦೩-೦೪ ರಲ್ಲಿಯ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಶೇಕಡಾ ಪಾಲು ೯೧.೮೪ ರಷ್ಟು ಮತ್ತು ಮಾರಾಟ ಮೌಲ್ಯದ ಪಾಲು ೯೨.೩೦ ರಷ್ಟಿದೆ.

೫) ೨೦೦೪-೦೫ ರಲ್ಲಿಯ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಆವಕದ ಶೇಕಡಾ ಪಾಲು ೮೪.೪೫ ರಷ್ಟು ಮತ್ತು ಮಾರಾಟ ಮೌಲ್ಯದ ಪಾಲು ೮೯.೯೨ ರಷ್ಟಿದೆ.

೬) ೨೦೦೫-೦೬ ರಲ್ಲಿಯ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಆವಕದ ಶೇಕಡಾ ಪಾಲು ೭೯ ರಷ್ಟು ಮತ್ತು ಮಾರಾಟ ಮೌಲ್ಯದ ಪಾಲು ೮೫.೩೮ ರಷ್ಟು ಇದೆ.

೭) ೨೦೦೬-೦೭ ರಲ್ಲಿಯ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಆವಕ ಶೇಕಡಾ ಪ್ರಮಾಣವು ೮೭.೮೫ ರಷ್ಟು ಮತ್ತು ಮಾರಾಟ ಮೌಲ್ಯದ ಶೇಕಡಾ ಪ್ರಮಾಣ ೯೧.೨೦ ರಷ್ಟು ಇದೆ.

೮) ೨೦೦೭-೦೮ ರಲ್ಲಿ ಒಟ್ಟು ಆವಕದಲ್ಲಿ ನಾಲ್ಕು ಉತ್ಪನ್ನಗಳ ಆವಕ ಶೇಕಡಾ ಪ್ರಮಾಣ ೯೪.೬೧ ರಷ್ಟು ಮತ್ತು ಮಾರಾಟ ಮೌಲ್ಯದ ಶೇಕಡಾ ಪ್ರಮಾಣ ೯೨.೪೭ ರಷ್ಟು ಇರುವದು ಕಂಡುಬರುತ್ತದೆ.

ಹೀಗೆ ಆವಕದ ಪ್ರಮಾಣದ ಶೇಕಡಾ ಪಾಲು ಏರಿಳಿತದಲ್ಲಿದ್ದು, ಅದಕ್ಕೆ ಸಂಬಂಧಿಸಿದ ವರ್ಷಗಳಲ್ಲಿಯ ಮಾರಾಟ ಮೌಲ್ಯದ ಶೇಕಡಾ ಪ್ರಮಾಣ (ಆವಕಕ್ಕೆ ಹೋಲಿಸಿದರೆ) ಹೆಚ್ಚಿಗೆ ಇದೆ. ಕಾರಣವೇನೆಂದರೆ ಆ ಉತ್ಪನ್ನಗಳ ಬೆಲೆಯಲ್ಲಿ ಆದ ಧನಾತ್ಮಕ ಏರಿಕೆ.

## ೪.೫ ಬೆಲ್ಲದ ಆವಕದ ಬೆಳವಣಿಗೆ ದರ ಮತ್ತು ಮೌಲ್ಯದ ಪ್ರತಿಶತ ಅಭಿವೃದ್ಧಿ ತೋರಿಸುವ ಕೋಷ್ಟಕ

(ಆವಕ - ಕ್ವಿಂಟಾಲ್ ಮತ್ತು ಮೌಲ್ಯ - ಕೋ.ರೂ.)

| ಅ.ಸಂ. | ವರ್ಷ | ಬೆಲ್ಲ | | | |
|---|---|---|---|---|---|
| | | ಆವಕ | % ಬೆಳವಣಿಗೆದರ | ಮೌಲ್ಯ | ಪ್ರತಿಶತ |
| ೧ | ೨೦೦೦-೨೦೦೧ | ೬೬೯೫೩೩ | -- | ೬೪.೮೦ | ೧೮.೫೯ |
| ೨ | ೨೦೦೧-೨೦೦೨ | ೫೬೬೧೯೩ | ೮೪.೫೫ | ೬೪.೪೦ | ೧೮.೪೭ |
| ೩ | ೨೦೦೨-೨೦೦೩ | ೪೬೮೧೧೪ | ೮೨.೬೮ | ೪೪.೪೪ | ೧೨.೭೫ |
| ೪ | ೨೦೦೩-೨೦೦೪ | ೩೨೮೫೧೩ | ೭೮.೭೦ | ೩೩.೧೭ | ೦೯.೫೨ |
| ೫ | ೨೦೦೪-೨೦೦೫ | ೨೦೬೩೮೬ | ೫೬.೦೨ | ೩೦.೭೬ | ೦೮.೮೨ |
| ೬ | ೨೦೦೫-೨೦೦೬ | ೧೭೯೩೫೯ | ೮೬.೪೨ | ೩೦.೩೧ | ೦೮.೭೦ |
| ೭ | ೨೦೦೬-೨೦೦೭ | ೩೫೯೦೬೨ | ೧೦೭.೭೮ | ೪೭.೯೩ | ೧೩.೭೫ |
| ೮ | ೨೦೦೭-೨೦೦೮ | ೩೧೫೧೨೧ | ೧೬೩.೦೦ | ೩೨.೭೭ | ೦೯.೪೦ |
| | ಒಟ್ಟು | | | ೩೪೮.೫೮ | ೧೦೦ |

ಮಾಹಿತಿ ಮೂಲ : ಕೃ.ಉ.ಮಾ.ಸ. ಮಹಾಲಿಂಗಪುರ, ವಾರ್ಷಿಕ ಮತ್ತು ಸಂಕ್ಷಿಪ್ತ ವರದಿಗಳು

## ೪.೬ ಹತ್ತಿಯ ಆವಕದ ಬೆಳವಣಿಗೆ ದರ ಮತ್ತು ಮೌಲ್ಯದ ಪ್ರತಿಶತ ಅಭಿವೃದ್ಧಿ ತೋರಿಸುವ ಕೋಷ್ಟಕ

| ಅ.ಸಂ. | ವರ್ಷ | ಹತ್ತಿ (ಸಿಓ-೨) | | | |
|---|---|---|---|---|---|
| | | ಆವಕ | % ಬೆಳವಣಿಗೆದರ | . ಮೌಲ್ಯ | ಪ್ರತಿಶತ |
| ೧ | ೨೦೦೦-೨೦೦೧ | ೧೬೦೮೬ | -- | ೦೩.೩೭ | ೧೫.೧೧ |
| ೨ | ೨೦೦೧-೨೦೦೨ | ೧೬೭೪೦ | ೧೦೪.೦೬ | ೦೩.೬೬ | ೧೬.೪೧ |
| ೩ | ೨೦೦೨-೨೦೦೩ | ೧೩೪೧೩ | ೮೦.೧೩ | ೦೨.೧೩ | ೦೯.೫೫ |
| ೪ | ೨೦೦೩-೨೦೦೪ | ೫೦೩೩ | ೩೭.೫೨ | ೦೧.೨೩ | ೦೫.೫೧ |
| ೫ | ೨೦೦೪-೨೦೦೫ | ೯೦೮೯ | ೧೮೦.೫೯ | ೦೨.೧೩ | ೦೯.೫೫ |
| ೬ | ೨೦೦೫-೨೦೦೬ | ೧೫೫೫೭ | ೧೭೧.೧೬ | ೦೨.೫೯ | ೧೧.೬೧ |
| ೭ | ೨೦೦೬-೨೦೦೭ | ೧೮೯೬೬ | ೧೨೧.೯೧ | ೦೩.೮೧ | ೧೭.೦೮ |
| ೮ | ೨೦೦೭-೨೦೦೮ | ೧೪೬೫೮ | ೭೭.೨೯ | ೦೩.೩೯ | ೧೫.೧೮ |
| | ಒಟ್ಟು | | | ೨೨.೩೧ | ೧೦೦ |

## ೪.೭ ಗೋವಿನಜೋಳದ ಆವಕದ ಬೆಳವಣಿಗೆ ದರ ಮತ್ತು ಮೌಲ್ಯದ ಪ್ರತಿಶತ ಅಭಿವೃದ್ಧಿ ತೋರಿಸುವ ಕೋಷ್ಟಕ

(ಆವಕ - ಕ್ವಿಂಟಾಲ್ ಮತ್ತು ಮೌಲ್ಯ - ಕೋ.ರೂ.)

| ಅ.ಸಂ. | ವರ್ಷ | ಗೋವಿನಜೋಳ | | | |
|---|---|---|---|---|---|
| | | ಆವಕ | % ಬೆಳವಣಿಗೆದರ | ಮೌಲ್ಯ | ಪ್ರತಿಶತ |
| ೧ | ೨೦೦೦-೨೦೦೧ | ೧೩೧೯೩೭ | -- | ೦೪.೯೯ | ೧೬.೩೬ |
| ೨ | ೨೦೦೧-೨೦೦೨ | ೧೦೫೧೯೨ | ೭೯.೭೩ | ೦೪.೧೬ | ೧೩.೬೪ |
| ೩ | ೨೦೦೨-೨೦೦೩ | ೬೦೯೩೮ | ೫೭.೯೩ | ೦೩.೦೨ | ೦೯.೯೦ |
| ೪ | ೨೦೦೩-೨೦೦೪ | ೩೭೧೭೧ | ೬೦.೧೦ | ೦೧.೯೦ | ೦೬.೨೩ |
| ೫ | ೨೦೦೪-೨೦೦೫ | ೬೧೧೧೨ | ೧೬೪.೪೧ | ೦೨.೮೭ | ೦೯.೪೧ |
| ೬ | ೨೦೦೫-೨೦೦೬ | ೭೮೮೩೭ | ೧೨೯.೦೦ | ೦೩.೭೪ | ೧೨.೨೬ |
| ೭ | ೨೦೦೬-೨೦೦೭ | ೮೬೩೨೬ | ೧೦೯.೫೦ | ೦೫.೪೦ | ೧೭.೭೦ |
| ೮ | ೨೦೦೭-೨೦೦೮ | ೭೩೩೧೧ | ೮೪.೯೨ | ೦೪.೪೨ | ೧೪.೫೦ |
| | ಒಟ್ಟು | | | ೩೦.೫೦ | ೧೦೦ |

ಮಾಹಿತಿ ಮೂಲ : ಕೃ.ಉ.ಮಾ.ಸ. ಮಹಾಲಿಂಗಪುರ, ವಾರ್ಷಿಕ ಮತ್ತು ಸಂಕ್ಷಿಪ್ತ ವರದಿಗಳು

## ೪.೮ ಅರಿಷಿಣದ ಆವಕದ ಬೆಳವಣಿಗೆ ದರ ಮತ್ತು ಮೌಲ್ಯದ ಪ್ರತಿಶತ ಅಭಿವೃದ್ಧಿ ತೋರಿಸುವ ಕೋಷ್ಟಕ

(ಆವಕ - ಕ್ವಿಂಟಾಲ್ ಮತ್ತು ಮೌಲ್ಯ - ಕೋ.ರೂ.)

| ಅ.ಸಂ. | ವರ್ಷ | ಅರಿಷಿಣ | | | |
|---|---|---|---|---|---|
| | | ಆವಕ | % ಬೆಳವಣಿಗೆದರ | ಮೌಲ್ಯ | ಪ್ರತಿಶತ |
| ೧ | ೨೦೦೦-೨೦೦೧ | ೩೭೮೭ | -- | ೦೦.೫೬ | ೧೨.೩೬ |
| ೨ | ೨೦೦೧-೨೦೦೨ | ೨೨೫೯ | ೫೯.೬೫ | ೦೦.೩೫ | ೦೭.೭೩ |
| ೩ | ೨೦೦೨-೨೦೦೩ | ೩೦೦೨ | ೧೩೨.೮೯ | ೦೦.೭೮ | ೧೭.೨೧ |
| ೪ | ೨೦೦೩-೨೦೦೪ | ೧೮೦೩ | ೬೦.೦೬ | ೦೦.೬೦ | ೧೩.೨೫ |
| ೫ | ೨೦೦೪-೨೦೦೫ | ೪೦೭೯ | ೨೨೬.೨೩ | ೦೧.೭೧ | ೩೭.೭೫ |
| ೬ | ೨೦೦೫-೨೦೦೬ | ೭೨೦ | ೧೭.೬೫ | ೦೦.೧೭ | ೦೩.೭೫ |
| ೭ | ೨೦೦೬-೨೦೦೭ | ೧೩೭೬ | ೧೯೧.೧೧ | ೦೦.೩೦ | ೦೬.೬೨ |
| ೮ | ೨೦೦೭-೨೦೦೮ | ೧೬೯ | ೧೨.೨೮ | ೦೦.೦೬ | ೦೧.೩೩ |
| | ಒಟ್ಟು | | | ೦೪.೫೩ | ೧೦೦ |

**೪.೫ ಪ್ರಮುಖವಾದ ಉತ್ಪನ್ನಗಳ ಬೆಳವಣಿಗೆ ದರ ವಿಶ್ಲೇಷಣೆ :**

ಮಾರುಕಟ್ಟೆಯ ಕ್ಷೇತ್ರದ ಮುಖ್ಯ ಮಾರುಕಟ್ಟೆ ಮತ್ತು ಉಪಮಾರುಕಟ್ಟೆಗಳಲ್ಲಿಯ ಪ್ರಮುಖ ಕೃಷಿ ಉತ್ಪನ್ನಗಳ ಮಾರಾಟ ಮೌಲ್ಯದ ಮತ್ತು ಆವಕದ ಬೆಳವಣಿಗೆ ದರದ ವಿಶ್ಲೇಷಣೆಯನ್ನು ಮೇಲಿನ ಕೋಷ್ಠಕಗಳಿಂದ ತಿಳಿದುಕೊಳ್ಳಲಾಗುವದು. ಇದಕ್ಕಾಗಿ ಪ್ರತಿ ಮುಖ್ಯ ಉತ್ಪನ್ನಗಳ ಬೆಳವಣಿಗೆಯ ದರವನ್ನು ಕಂಡುಕೊಳ್ಳಲು ಈ ಸಮೀಕರಣವನ್ನು ಬಳಸಲಾಗಿದೆ.

೧) ಬೆಳವಣಿಗೆದರ = $\dfrac{\text{ಚಾಲ್ತಿ ವರ್ಷದ ಆವಕ (ಆಉತ್ಪನ್ನ)}}{\text{ಹಿಂದಿನ ವರ್ಷದ ಆವಕ (ಆಉತ್ಪನ್ನ)}} \times ೧೦೦$

೨) ಉತ್ಪನ್ನದ ಪ್ರತಿಶತ ಪ್ರಮಾಣ ದರ = $\dfrac{\text{ಉತ್ಪನ್ನದ ಮೌಲ್ಯ}}{\text{ಅದೇ ಉತ್ಪನ್ನದ ಒಟ್ಟು ಮೌಲ್ಯ}} \times ೧೦೦$

ಅದೇ ಉತ್ಪನ್ನದ ಒಟ್ಟು ಮೌಲ್ಯವನ್ನು ಅಧ್ಯಯನದ ಅವಧಿಯ ೮ ವರ್ಷಗಳ ಮೌಲ್ಯವನ್ನು ಕೂಡಿಸಲಾಗುತ್ತದೆ. ೨೦೦೦-೦೧ ರ ಆವಕವನ್ನು ಆಧಾರವಾಗಿಸಿಕೊಂಡು ಈ ಭಾಗದಲ್ಲಿ ಬೆಲ್ಲ, ಹತ್ತಿ(ಸಿಓ-೨), ಗೋವಿನಜೋಳ ಮತ್ತು ಅರಿಷಿಣದಂತಹ ಮುಖ್ಯ ಉತ್ಪನ್ನಗಳ ಬಗ್ಗೆ ವಿಶ್ಲೇಷಿಸಲಾಗುತ್ತದೆ.

**೧) ಬೆಲ್ಲದ ಆವಕ ಪ್ರಮಾಣದಲ್ಲಿಯ ಪ್ರಗತಿ ಅಥವಾ ಹಿನ್ನಡೆ ದರದ ಪರಿಶೀಲನೆ :**

೨೦೦೦-೨೦೦೧ ರ ಅವಧಿಯನ್ನು ಅಧ್ಯಯನದ ಆಧಾರ ವರ್ಷವೆಂದು ಪರಿಗಣಿಸಲಾಗಿದೆ. ಅದಕ್ಕನುಗುಣವಾಗಿ ಮುಂದಿನ ವರ್ಷಗಳ ಬೆಳವಣಿಗೆ ದರದ ವಿಶ್ಲೇಷಣೆ ಇಂತಿದೆ.

i) ೨೦೦೦-೨೦೦೧ ವರ್ಷವನ್ನು ಆಧಾರವೆಂದು ಪರಿಗಣಿಸಿದಾಗ, ೨೦೦೧-೦೨ ರಲ್ಲಿ ಆವಕದ ಪ್ರಮಾಣವು ಪ್ರತಿಶತ ೧೫.೪೫ ರಷ್ಟು ಹಿನ್ನಡೆಯಾಗಿರುವದು ಕಂಡುಬರುತ್ತದೆ.

ii) ೨೦೦೨-೦೩ ರಲ್ಲಿಯ ಆವಕವನ್ನು ಆಧಾರವರ್ಷ ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೩೦.೦೮ ರಷ್ಟು ಮತ್ತು ೨೦೦೧-೦೨ ರ ಆವಕಕ್ಕೆ ೧೭.೩೨ ರಷ್ಟು ಹಿನ್ನಡೆಯಾಗಿದೆ.

iii) ೨೦೦೩-೦೪ ರಲ್ಲಿಯ ಆವಕವನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೫೦.೯೩ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೪೧.೯೮ ರಷ್ಟು ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ಶೇ. ೨೧.೩೦ ರಷ್ಟು ಹಿನ್ನಡೆಯಾಗಿದೆ.

iv) ೨೦೦೪-೦೫ ರಲ್ಲಿಯ ಆವಕವನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೬೯.೧೭ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೩೬.೪೫ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದಾಗ ೫೫.೯೧ ರಷ್ಟು ಮತ್ತು ೨೦೦೩-೦೪ ಕ್ಕೆ ಹೋಲಿಸಿದಾಗ ಶೇ. ೪೩.೯೮ ರಷ್ಟು ಕಡಿಮೆಯಾಗಿರುವದು ಕಂಡುಬರುತ್ತದೆ.

v) ೨೦೦೫-೦೬ ರ ಆವಕವನ್ನು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೭೫.೨೧ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ಶೇ. ೬೮.೩೨ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೩೮.೩೧

ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ಶೇ. ೪೫.೪೦ ರಷ್ಟು ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ೧೩.೦೯ ರಷ್ಟು ಹಿನ್ನಡೆಯಾಗಿದೆ.

vi) ೨೦೦೬-೦೭ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೪೬.೩೭, ೨೦೦೧-೦೨ ಕ್ಕೆ ಹೋಲಿಸಿದರೆ ೩೬.೫೮ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೨೩.೩೦ ರಷ್ಟು ಹಿನ್ನಡೆಯನ್ನು ಕಾಣಲಾಗುತ್ತದೆ. ಆದರೆ ೨೦೦೩-೦೪ ಕ್ಕೆ ಹೋಲಿಸಿದರೆ ೯.೩೦ ರಷ್ಟು, ೨೦೦೪-೦೫ಕ್ಕೆ ಹೋಲಿಸಿದರೆ ೭೩.೯೮ ರಷ್ಟು ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೧೦೦.೧೯ ರಷ್ಟು ಬೆಳವಣಿಗೆಯು ಕಂಡುಬರುತ್ತದೆ.

vii) ೨೦೦೭-೦೮ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೫೨.೯೩ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೪೪.೩೪ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೩೨.೬೮ ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ೪೦.೭೭ ರಷ್ಟು ಇಳಿಕೆಯಾಗಿರುವದನ್ನು ಕಾಣಲಾಗುತ್ತದೆ. ೨೦೦೪-೦೫ ರ ಆವಕದ ೫೨.೬೮ ಮತ್ತು ೨೦೦೫-೦೬ ರ ಆವಕದ ೭೫.೬೫ ರಷ್ಟು ಏರಿಕೆಯಾಗಿದ್ದರೆ, ೨೦೦೬-೦೭ ರ ಆವಕಕ್ಕೆ ೧೨.೨೪ ರಷ್ಟು ಇಳಿಕೆಯಾಗಿದೆ.

ಒಟ್ಟಿನಲ್ಲಿ ೨೦೦೦-೦೧ ರಿಂದ ಬೆಲ್ಲದ ಆವಕವು ೨೦೦೫-೦೬ ರವರೆಗೆ ಇಳಿಕೆಯ ಪ್ರವೃತ್ತಿಯನ್ನು, ೨೦೦೬-೦೭ ರಲ್ಲಿ ಏರಿಕೆ ಮತ್ತೆ ೨೦೦೭-೦೮ ರಲ್ಲಿ ಇಳಿಕೆಯಾಗಿರುವದು ಕಂಡುಬರುತ್ತದೆ.

**೨) ಹತ್ತಿ (ಸಿಓ-೨) ಆವಕದ ಬೆಳವಣಿಗೆಯ ಪ್ರವೃತ್ತಿ:**

i) ೨೦೦೧-೦೨ ರಲ್ಲಿಯ ಹತ್ತಿಯ ಆವಕವು, ೨೦೦೦-೦೧ ಕ್ಕೆ ಹೋಲಿಸಿದಾಗ ೦೪.೦೬ ಏರಿಕೆಯಾಗಿದೆ.

ii) ೨೦೦೨-೦೩ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದಾಗ ೧೬.೬೬ ರಷ್ಟು ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ೧೯.೮೮ ರಷ್ಟು ಇಳಿಕೆಯಾಗಿದೆ.

iii) ೨೦೦೩-೦೪ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದಾಗ ೬೮.೭೧, ೨೦೦೧-೦೨ ಕ್ಕೆ ಹೋಲಿಸಿದರೆ ೬೯.೯೩ ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ೬೨.೪೮ ರಷ್ಟು ಇಳಿಕೆಯಾಗಿದೆ.

iv) ೨೦೦೪-೦೫ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೪೩.೫೦, ೨೦೦೧-೦೨ ಕ್ಕೆ ಹೋಲಿಸಿದರೆ ೪೫.೭೧ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೩೨.೨೩ ರಷ್ಟು ಇಳಿಕೆಯನ್ನು ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ೮೦.೫೯ ರಷ್ಟು ಏರಿಕೆಯಾಗಿದೆ.

v) ೨೦೦೫-೦೬ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೩.೨೯ ರಷ್ಟು ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ೭.೦೭ ರಷ್ಟು ಇಳಿಕೆಯಾಗಿದ್ದರೆ, ೨೦೦೨-೦೩ ಕ್ಕೆ ಹೋಲಿಸಲಾಗಿ ೧೫.೯೮ ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ೭೧.೧೬ ರಷ್ಟು ಏರಿಕೆಯಾಗಿದೆ.

vi) ೨೦೦೬-೦೭ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೧೭.೯೦ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೧೩.೩೦ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೪೧.೪೦ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೨೭೬.೮೩ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ೧೦೮.೬೬ ರಷ್ಟು ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೨೧.೯೧ ರಷ್ಟು ಏರಿಕೆಯಾಗಿದ್ದು, ಅಧ್ಯಯನದ ಅವಧಿಯಲ್ಲಿ ಅಧಿಕ ಆವಕಾದ ವರ್ಷವು ಇದಾಗಿದೆ.

vii) ೨೦೦೭-೦೮ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದಾಗ ೮.೮೮ ರಷ್ಟು ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ೧೨.೪೪ ರಷ್ಟು ಇಳಿಕೆಯಾಗಿದ್ದರೆ, ೨೦೦೨-೦೩ ಕ್ಕೆ ಹೋಲಿಸಿದರೆ ೯.೨೮ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೧೯೧.೧೨ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ೬೧.೨೭ ಕ್ಕೆ ಏರಿಕೆಯಾದರೆ, ೨೦೦೫-೦೬ ಕ್ಕೆ ಹೋಲಿಸಿದಾಗ ೫.೭೮ ರಷ್ಟು ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ೨೨.೭೧ ರಷ್ಟು ಇಳಿಕೆಯಾಗಿದೆ.

ಹೀಗೆ ಹತ್ತಿಯ ಆವಕವು ಅಧ್ಯಯನದ ಆರಂಭದ ವರ್ಷ ೨೦೦೦-೦೧ ರಿಂದ ೨೦೦೪-೦೫ ರವರೆಗೆ ಇಳಿತವಾಗಿದೆ. ೨೦೦೪-೦೫ ಕ್ಕೆ ಹೋಲಿಸಿದರೆ ೨೦೦೬-೦೭ ಹೆಚ್ಚಾಗಿದ್ದು ಮತ್ತೆ ೨೦೦೭-೦೮ ರಲ್ಲಿ ೪೩೦೮ ಕ್ವಿಂಟಲ್‌ದಷ್ಟು ಇಳಿಕೆಯಾಗಿದ್ದು ಕಂಡುಬರುತ್ತದೆ.

**೩) ಗೋವಿನಜೋಳದ ಆವಕದ ಬೆಳವಣಿಗೆ ಪ್ರವೃತ್ತಿ :**

i) ೨೦೦೧-೦೨ ರ ಆವಕವನ್ನು ೨೦೦೦-೦೧ ಕ್ಕೆ ಹೋಲಿಸಿದರೆ ೨೦.೨೭ ರಷ್ಟು ಇಳಿಕೆಯಾಗಿದೆ.

ii) ೨೦೦೨-೦೩ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೫೩.೮೧ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೪೨.೦೭ ರಷ್ಟು ಇಳಿಕೆಯಾಗಿದೆ.

iii) ೨೦೦೩-೦೪ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೭೧.೮೩, ೨೦೦೧-೦೨ ಕ್ಕೆ ಹೋಲಿಸಿದರೆ ೬೪.೬೬ ರಷ್ಟು ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ೩೯ ರಷ್ಟು ಇಳಿಕೆಯಾಗಿದೆ.

iv) ೨೦೦೪-೦೫ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೫೩.೬೮ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೪೧.೯೦ ರಷ್ಟು ಇಳಿಕೆಯಾಗಿರುತ್ತದೆ. ೨೦೦೨-೦೩ ಕ್ಕೆ ಹೋಲಿಸಿದಾಗ ೦.೨೯ ರಷ್ಟು ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ೬೪.೪೧ ರಷ್ಟು ಏರಿಕೆಯಾಗಿದೆ.

v) ೨೦೦೫-೦೬ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೪೦.೨೫ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೨೫.೦೫ ರಷ್ಟು ಇಳಿಕೆಯನ್ನು ಕಂಡುಬರುತ್ತದೆ. ೨೦೦೨-೦೩ ಕ್ಕೆ ಹೋಲಿಸಿದರೆ ೨೯.೩೭ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೧೧೨.೦೯ ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ೨೯.೦೪ ರಷ್ಟು ಏರಿಕೆಯಾಗಿದೆ.

vi) ೨೦೦೬-೦೭ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದಾಗ ೩೪.೫೭ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೧೭.೯೩ ರಷ್ಟು ಇಳಿಕೆಯಾಗಿದ್ದರೆ, ೨೦೦೨-೦೩ ಕ್ಕೆ ಹೋಲಿಸಿದಾಗ ೪೧.೬೬ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೧೩.೨೨ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ೪೧.೨೬ ರಷ್ಟು, ೨೦೦೫-೦೬ ಕ್ಕೆ ಹೋಲಿಸಿದರೆ ೯.೫೦ ರಷ್ಟು ಏರಿಕೆಯಾಗಿದೆ.

vii) ೨೦೦೭-೦೮ ರ ಆವಕವು, ೨೦೦೦-೦೧ ಕ್ಕೆ ಹೋಲಿಸಿದರೆ ೪೪.೪೩ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೩೦.೩೦ ರಷ್ಟು ಇಳಿಕೆಯಾಗಿದೆ. ೨೦೦೨-೦೩ ರ ಆವಕಕ್ಕೆ ಹೋಲಿಸಿದರೆ ೨೦.೩೦ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೯೭.೨೩ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ೧೯.೯೬ ರಷ್ಟು ಏರಿಕೆಯನ್ನು ಕಾಣುತ್ತೇವೆ. ಆದರೆ ೨೦೦೫-೦೬ ಕ್ಕೆ ಹೋಲಿಸಿದರೆ ೭೦.೦೯ ರಷ್ಟು ಮತ್ತು ೨೦೦೬-೦೭ ಕ್ಕೆ ಹೋಲಿಸಿದಾಗ ೧೫.೦೮ ರಷ್ಟು ಇಳಿಕೆಯನ್ನು ಕಾಣುತ್ತೇವೆ.

ಹೀಗೆ ಗೋವಿನಜೋಳದ ಆವಕದಲ್ಲಿ ಆರಂಭದ ಅವಧಿಯಿಂದ ೨೦೦೦-೦೧ ರಿಂದ ೨೦೦೩-೦೪ ರವರೆಗೆ ಇಳಿಗೆ, ೨೦೦೩-೦೪ ರ ನಂತರ ೨೦೦೬-೦೭ ರ ವರೆಗೆ ಏರಿಕೆ ಮತ್ತೆ ೨೦೦೭-೦೮ ರಲ್ಲಿ ಇಳಿಕೆ ಪ್ರವೃತ್ತಿ ಹೊಂದಿದೆ ಎಂದು ಕಂಡುಬರುತ್ತದೆ.

**೪) ಅರಿಷಿಣದ ಆವಕದಲ್ಲಿಯ ಬೆಳವಣಿಗೆ ಪ್ರವೃತ್ತಿ :**

i) ೨೦೦೦-೦೧ ರ ಆವಕವನ್ನು ೨೦೦೧-೦೨ ಕ್ಕೆ ಹೋಲಿಸಿದರೆ ೪೦.೩೫ ರಷ್ಟು ಇಳಿಕೆ.

ii) ೨೦೦೨-೦೩ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೨೦.೭೩ ರಷ್ಟು ಇಳಿಕೆಯನ್ನು, ೨೦೦೧-೦೨ ಕ್ಕೆ ಹೋಲಿಸಿದರೆ ೩೨.೮೯ ರಷ್ಟು ಏರಿಕೆ ಕಾಣುತ್ತದೆ.

iii) ೨೦೦೩-೦೪ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೫೨.೩೯ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೨೦.೧೯ ರಷ್ಟು ಮತ್ತು ೨೦೦೨-೦೩ ಕ್ಕೆ ಹೋಲಿಸಿದರೆ ೩೯.೯೪ ಇಳಿಕೆಯು ಕಂಡುಬರುತ್ತದೆ.

iv) .೨೦೦೪-೦೫ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೭.೭೧ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೮೦.೫೭ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೩೫.೮೮ ರಷ್ಟು ಮತ್ತು ೨೦೦೩-೦೪ ಕ್ಕೆ ಹೋಲಿಸಿದರೆ ೧೨೬.೨೪ ರಷ್ಟು ಏರಿಕೆ ಕಂಡುಬರುತ್ತದೆ. ಅಧ್ಯಯನದ ಅವಧಿಯಲ್ಲಿ ಈ ಆವಕವು ಅತೀ ಹೆಚ್ಚಿನದಾಗಿದೆ.

v) ೨೦೦೫-೦೬ ರ ಆವಕವನ್ನು, ೨೦೦೦-೦೧ ಕ್ಕೆ ಹೋಲಿಸಿದರೆ ೮೦.೯೯ ರಷ್ಟು, ೨೦೦೧-೦೨ ಕ್ಕೆ ಹೋಲಿಸಿದರೆ ೬೮.೧೩ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೭೬.೦೨ ರಷ್ಟು, ೨೦೦೩-೦೪ ಕ್ಕೆ ಹೋಲಿಸಿದರೆ ೬೦.೦೬ ರಷ್ಟು ಮತ್ತು ೨೦೦೪-೦೫ ಕ್ಕೆ ಹೋಲಿಸಿದರೆ ೮೨.೩೫ ರಷ್ಟು ಇಳಿಕೆಯಾಗಿರುವುದು ಕಂಡುಬರುತ್ತದೆ.

vi) ೨೦೦೬-೦೭ ರ ಆವಕವನ್ನು ೨೦೦೦-೦೧ ಕ್ಕೆ ಹೋಲಿಸಿದರೆ ೬೩.೬೭, ೨೦೦೧-೦೨ ಕ್ಕೆ ಹೋಲಿಸಿದರೆ ೩೦.೦೯ ರಷ್ಟು, ೨೦೦೨-೦೩ ಕ್ಕೆ ಹೋಲಿಸಿದರೆ ೬೬.೨೭ ರಷ್ಟು ಇಳಿಕೆಯನ್ನು ಮತ್ತು ೨೦೦೫-೦೬ ಕ್ಕೆ ಹೋಲಿಸಿದರೆ ೯೧.೧೧ ರಷ್ಟು ಏರಿಕೆ ಕಾಣುತ್ತದೆ.

vii) ೨೦೦೭-೦೮ ರ ಆವಕವು ಅಧ್ಯಯನದ ಅವಧಿಯಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಇದೆ. ಅದನ್ನು ೨೦೦೦-೦೧ ಕ್ಕೆ ೯೫.೫೪, ೨೦೦೧-೦೨ ಕ್ಕೆ ೯೨.೫೨, ೨೦೦೨-೦೩ ಕ್ಕೆ ೯.೪೩, ೨೦೦೩-೦೪ ಕ್ಕೆ ಹೋಲಿಸಿದರೆ ೯೦.೬೩ ರಷ್ಟು, ೨೦೦೪-೦೫ ಕ್ಕೆ ಹೋಲಿಸಿದರೆ ೯೫.೮೬ ರಷ್ಟು, ೨೦೦೫-೦೬ ಕ್ಕೆ ಹೋಲಿಸಿದರೆ ೭೬.೫೩ ರಷ್ಟು ಮತ್ತು ೨೦೦೬-೦೭ ಕ್ಕೆ ಹೋಲಿಸಿದರೆ ೮೭.೭೨ ರಷ್ಟು ಇಳಿಕೆಯಾಗಿದ್ದು ಕಂಡುಬರುತ್ತದೆ.

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಕ್ಷೇತ್ರದಲ್ಲಿ ವ್ಯವಹರಿಸುವ ಒಟ್ಟು ಉತ್ಪನ್ನಗಳಲ್ಲಿ ಬೆಲ್ಲ, ಹತ್ತಿ, ಗೋವಿನಜೋಳ ಮತ್ತು ಅರಿಷಿಣ ಪ್ರಮುಖವಾಗಿವೆ. ಈ ಪ್ರತಿಯೊಂದು ಉತ್ಪನ್ನದ ಒಟ್ಟು ಮಾರಾಟದ ಮೌಲ್ಯದಲ್ಲಿ (೮ ವರ್ಷದ ಅವಧಿ) ಪ್ರತಿಶತ ಪ್ರಮಾಣವನ್ನು ತಿಳಿಯುವ ಪ್ರಯತ್ನ ಇದಾಗಿದೆ.

**೧) ಬೆಲ್ಲ :** ಬೆಲ್ಲದ ಪ್ರತಿ ವರ್ಷದ ಪ್ರತಿಶತ ಪ್ರಮಾಣವು ೨೦೦೦-೦೧ ರಿಂದ ೨೦೦೭-೦೮ ರವರೆಗೆ ೧೮.೫೯, ೧೮.೪೭, ೧೨.೭೫, ೦೯.೫೨, ೦೮.೮೨, ೦೮.೭೦, ೧೩.೭೫ ಮತ್ತು ೦೯.೪೦ ಕ್ರಮವಾಗಿ ಇರುತ್ತದೆ. ಇದರಲ್ಲಿ ೨೦೦೦-೦೧ ರ ಪ್ರತಿಶತ ಪ್ರಮಾಣ ಅಧಿಕವಾಗಿದೆ. ಯಾಕೆಂದರೆ ಈ ಅವಧಿಯಲ್ಲಿಯ ಆವಕವು ಅಧ್ಯಯನದ ಅವಧಿಯಲ್ಲಿಯೆ ಅಧಿಕ (೬೬೯೫೩೩ ಕ್ವಿಂಟಲ್) ಕಡಿಮೆ ಪ್ರತಿಶತ ಪ್ರಮಾಣವು ೨೦೦೫-೦೬ ರಲ್ಲಿದೆ.

**೨) ಹತ್ತಿ(ಸಿಓ-೨) :** ೨೦೦೦-೦೧ ರಿಂದ ೨೦೦೭-೦೮ ರವರೆಗಿನ ಒಟ್ಟು ಮಾರಾಟ ಮೌಲ್ಯದಲ್ಲಿ ಪ್ರತಿವರ್ಷದ ಮಾರಾಟ ಮೌಲ್ಯದ ಪ್ರತಿಶತ ಪ್ರಮಾಣ ೧೫.೧೧, ೧೬.೪೧, ೯.೫೫, ೫.೫೧, ೯.೫೫, ೧೧.೬೧, ೧೭.೦೮ ಮತ್ತು ೧೫.೧೮ ರಷ್ಟು ಕ್ರಮವಾಗಿ ಇರುತ್ತದೆ. ೨೦೦೬-೦೭ ರಲ್ಲಿ ೧೭.೦೮ ಹೆಚ್ಚು ಮತ್ತು ೨೦೦೩-೦೪ ರಲ್ಲಿ ೫.೫೧ ರಷ್ಟು ಪ್ರಮಾಣ ಕಡಿಮೆಯದಾಗಿದೆ.

**೩) ಗೋವಿನಜೋಳ :** ೨೦೦೦-೦೧ ರಿಂದ ೨೦೦೭-೦೮ ರವರೆಗೆ ಒಟ್ಟು ಮಾರಾಟದ ಮೌಲ್ಯದಲ್ಲಿ ಪ್ರತಿವರ್ಷದ ಪ್ರತಿಶತ ಮಾರಾಟ ಮೌಲ್ಯದ ಪ್ರಮಾಣವು, ೧೬.೩೬, ೧೩.೬೪, ೯.೯೦, ೦೬.೨೩, ೯.೪೧, ೧೨.೨೬, ೧೭.೭೦ ಮತ್ತು ೧೪.೫೦ ಕ್ರಮವಾಗಿ ಅನ್ವಯಿಸುತ್ತದೆ. ೨೦೦೬-೦೭ ರಲ್ಲಿಯ ಪ್ರತಿಶತ ಪ್ರಮಾಣದ ಭಾಗವು ೧೭.೭೦ ಹೆಚ್ಚಿನದು ಮತ್ತು ೨೦೦೩-೦೪ ರಲ್ಲಿಯ ೬.೨೩ ಕಡಿಮೆದಾಗಿರುತ್ತದೆ.

**೪) ಅರಿಷಿಣ :** ೨೦೦೦-೦೧ ರಿಂದ ೨೦೦೭-೦೮ ರವರೆಗೆ ೧೨.೩೬, ೭.೭೩, ೧೭.೨೧, ೧೩.೨೫, ೩೭.೭೫, ೦೩.೭೫, ೬.೭೨ ಮತ್ತು ೧.೩೩ ಕ್ರಮವಾಗಿ ಅನ್ವಯಿಸುತ್ತವೆ. ೨೦೦೪-೦೫ ರಲ್ಲಿಯ ೩೭.೭೫ ಹೆಚ್ಚಿನ ಪ್ರಮಾಣದ ಮತ್ತು ೨೦೦೭-೦೮ ರಲ್ಲಿಯ ೧.೩೩ ಅತೀ ಕಡಿಮೆ ಪ್ರಮಾಣದ ಪಾಲನ್ನು ಹೊಂದಿರುತ್ತವೆ.

**೪.೬ ಪ್ರಮುಖ ಉತ್ಪನ್ನಗಳ ಬೆಳವಣಿಗೆ ದರದ ಏರಿಳಿತಕ್ಕೆ ಕಾರಣಗಳು :**

೧) ೨೦೦೩-೦೪ ರಿಂದ ೨೦೦೫-೦೬ ರವರೆಗೆ ಕರ್ನಾಟಕದಾದ್ಯಂತ ೩ ವರ್ಷಗಳ ಬರಗಾಲದ ಪರಿಣಾಮದಿಂದಾಗಿ ಕಬ್ಬು ಮತ್ತು ಇತರ ವಾಣಿಜ್ಯ ಹಾಗೂ ದವಸ-ಧಾನ್ಯಗಳ

ಉತ್ಪಾದನೆಯಲ್ಲಿ ಇಳಿಕೆಯುಂಟಾಗಿತ್ತು. ಈ ಕಾರಣದಿಂದಾಗಿ ಉತ್ಪನ್ನಗಳ ಆವಕವು ಸಹ ಇಳಿಕೆಯಾಗಿದೆ.

೨) ಸಕ್ಕರೆ ಕಾರ್ಖಾನೆಗಳ ಸಂಖ್ಯೆಯಲ್ಲಿ ವೃದ್ಧಿ, ಅವುಗಳ ಕಬ್ಬು ನುರಿಸುವ ಸಾಮರ್ಥ್ಯದಲ್ಲಿನ ಹೆಚ್ಚಳ, ಹೆಚ್ಚುವರಿ ಅವಧಿಯವರೆಗೆ ಕಬ್ಬು ಅರೆಯುವದು ಮುಂತಾದವುಗಳಾಗಿವೆ.

೩) ಆಲೆ-ಮನೆ ಸಮಸ್ಯೆಗಳು : ಸತತ ೩ ವರ್ಷಗಳ ಬರಗಾಲ ಮತ್ತು ಸಕ್ಕರೆ ಕಾರ್ಖಾನೆಗಳ ಸಂಖ್ಯೆಯಲ್ಲಿ ವೃದ್ಧಿಯಿಂದ ಆಲೆ-ಮನೆಯ ಅಸ್ತಿತ್ವದ ಮೇಲೆ ಪ್ರಭಾವ ಬೀರಿದವು. ಇವುಗಳ ಜೊತೆಗೆ ಆಲೆ-ಮನೆಗಳು ಇತರ ಹಲವಾರು ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದವು ಅವುಗಳೆಂದರೆ :

i) ಬೆಲ್ಲದ ಉತ್ಪಾದನೆಗೆ ಬೇಕಾಗುವ ಹೈಡ್ರೊ, ಅಸಿಡ್ ಮುಂತಾದವುಗಳ ಬೆಲೆಯಲ್ಲಿ ಗಣನೀಯ ಏರಿಕೆಯುಂಟಾಗಿ ಬೆಲ್ಲದ ಉತ್ಪಾದನಾ ವೆಚ್ಚ ಅಧಿಕವಾಯಿತು.

ii) ಬೆಲ್ಲ ತಯಾರಿಕಾ ಘಟಕದಲ್ಲಿ ಕಾರ್ಯನಿರ್ವಹಿಸಲು ಕಾರ್ಮಿಕರ ಕೊರತೆಯುಂಟಾಯಿತು. ಬರಗಾಲದ ಈ ಅವಧಿಯಲ್ಲಿ ಬೇರೆ ಬೇರೆ ಕಾಮಗಾರಿಗಳನ್ನು ಸರ್ಕಾರ ಘೋಷಿಸಿ ಅನುಷ್ಠಾನದಲ್ಲಿ ತಂದಿತು. ಈ ಘಟಕದಲ್ಲಿ ಕಾರ್ಯನಿರತರಾಗಿದ್ದ ಕಾರ್ಮಿಕರು ೧೨ ರಿಂದ ೧೪ ಗಂಟೆಗಳ ಕಾಲ ಕಾರ್ಯದಲ್ಲಿ ತೊಡಗಿದರು. ಅವರಿಗೆ ತಕ್ಕ ಪ್ರತಿಫಲ ದೊರೆಯುತ್ತಿರಲಿಲ್ಲ. ಸರ್ಕಾರದ ಕಾಮಗಾರಿಗಳಲ್ಲಿ ೮ ತಾಸು ದುಡಿದರೆ ದಿನದ ಕೂಲಿ ಲಭಿಸುತ್ತಿತ್ತು.

iii) ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಕಡಿಯಲು ಮತ್ತು ವಾಹನಗಳಲ್ಲಿ ಹೇರಲು ಬೇಕಾಗುವ ಕಾರ್ಮಿಕರನ್ನು ಆಲೆ ಮನೆಯಲ್ಲಿ ದುಡಿಯುತ್ತಿದ್ದವರನ್ನು ಮುಂಗಡ ಹಣಕೊಟ್ಟು ಆಕರ್ಷಿಸಿದರು.

iv) ಅಡತದಾರರು ಆರಂಭಿಸಿದ್ದ ಬೆಲ್ಲ ತಯಾರಿಕಾ ಘಟಕಗಳು ೫ ಕೆ.ಜಿ. ಮತ್ತು ೧ ಕೆ.ಜಿ.ಯ ಅಚ್ಚು ಬೆಲ್ಲ ತಯಾರಿಕೆಗೆ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ಬೇಕಾಗುತ್ತಿದ್ದರು. ಆದರೆ ಇತರ ಉಪಕಸಬುಗಳಾದ ಜೈವಿಕ ತಂತ್ರಜ್ಞಾನದ ಘಟಕ, ರಸ್ತೆ ನಿರ್ಮಾಣದ ಕಾರ್ಯಗಳಲ್ಲಿ ಆಕರ್ಷಣೆ ಅಧಿಕವಾಗಿತ್ತು.

೪) ಕಬ್ಬು ಬೆಳೆಗೆ ಬಿಳಿಹೇಣು ರೋಗವು ತಗುಲಿ ಉತ್ಪಾದನೆ ಮತ್ತು ಉತ್ಪತ್ತಿಯ ಗುಣಮಟ್ಟದ ಮೇಲೆ ಪ್ರಭಾವ ಬೀರಿತು.

೫) ೨೦೦೬-೦೭ ರಲ್ಲಿ ಕೃಷ್ಣಾ ಮತ್ತು ಘಟಪ್ರಭಾ ನದಿಗಳಿಗೆ ಪ್ರವಾಹ ಬಂದು ೧೦ ದಿನಗಳ ವರೆಗೆ, ಸುಳಿಯಮೇಲೆ ನೀರು ನಿಂತಕಾರಣ ಆ ಪ್ರದೇಶದಲ್ಲಿಯ ಕಬ್ಬಿನ ಉತ್ಪಾದನೆ ತಗ್ಗಿತು. ಇದರಿಂದ ಬೆಲ್ಲದ ಆವಕದ ಮೇಲೆ ಪರಿಣಾಮವುಂಟಾಯಿತು.

೬) ಅಧ್ಯಯನದ ಅವಧಿಯಲ್ಲಿ ಉತ್ತರಗಳ ಆವಕದ ಪ್ರಮಾಣ ಕಡಿಮೆಯಿದ್ದರೂ ಆ ಉತ್ಪನ್ನಗಳ ಮೌಲ್ಯದಲ್ಲಿ ಹೆಚ್ಚಳವಾಗಲು ಬೆಲೆಗಳು ಗಣನೀಯ ಪ್ರಮಾಣದ ಹೆಚ್ಚಳಕ್ಕೆ ಕಾರಣವಾಗಿದೆ.

೭) ಗೋವಿನಜೋಳದ ಆವಕದಲ್ಲಿ ಇಳಿಕೆಯಾಗಿದೆ. ಅದಕ್ಕೆ ಕಾರಣಗಳೆಂದರೆ :

i) ಮಾರುಕಟ್ಟೆ ಆವರಣದ ಹೊರಗಿನ ವ್ಯಾಪಾರಸ್ಥರು ರೈತರಿಂದ ನೇರವಾಗಿ ಖರೀದಿಸುತ್ತಿದ್ದರು.

ii) ಹೊರ ರಾಜ್ಯದ ವ್ಯಾಪಾರಸ್ಥರು ರೈತನ ಹೊಲಕ್ಕೆ ಹೋಗಿ ನೇರವಾಗಿ ಹಸಿ ತೆನೆ ಅಥವಾ ಒಣಗಿಸಿದ ಕಾಳುಗಳನ್ನು ಖರೀದಿಸುತ್ತಿದ್ದರು.

೮) ಅರಿಷಿಣ ಆವಕದಲ್ಲಿ ಇಳಿಕೆಯಾಗಲು ಕಾರಣವೇನೆಂದರೆ, ಸಮೀಪದ ಸಾಂಗ್ಲಿ ಮಾರುಕಟ್ಟೆಯಲ್ಲಿನ ಆಕರ್ಷಣೆಗಳು, ಆ ರಾಜ್ಯದಲ್ಲಿ ಅರಿಷಿಣದ ಮಾರಾಟದ ಮೇಲೆ ಸೆಸ್ ಇಲ್ಲದಿರುವದು, ಸಂಸ್ಕರಣ ಘಟಕಗಳು ಅಧಿಕ ಸಂಖ್ಯೆಯಲ್ಲಿರುವದು, ಖರೀದಿದಾರರ ಸಂಖ್ಯೆ ಆ ಪೇಟೆಯಲ್ಲಿರುವ ಹೆಚ್ಚಿಗೆ ಇರುವದು.

**೪.೯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಹಾಲಿಂಗಪುರ ಆದಾಯದ ಮೂಲಗಳನ್ನು ತೋರಿಸುವ ಕೋಷ್ಟಕ**

(ಲಕ್ಷ ರೂ.ಗಳಲ್ಲಿ)

| ಅ.ಸಂ. | ವರ್ಷ | ಮಾರುಕಟ್ಟೆ ಶುಲ್ಕ | ಲೈಸನ್ಸ್ ಶುಲ್ಕ | ಇತರೆ | ಒಟ್ಟು |
|---|---|---|---|---|---|
| ೧ | ೨೦೦೦-೨೦೦೧ | ೭೫.೦೯ | ೦೦.೮೧ | ೦೭.೮೩ | ೮೩.೭೩ |
| ೨ | ೨೦೦೧-೨೦೦೨ | ೭೩.೭೪ | ೦೦.೮೬ | ೦೯.೨೩ | ೮೩.೮೩ |
| ೩ | ೨೦೦೨-೨೦೦೩ | ೫೩.೯೪ | ೦೦.೯೩ | ೦೯.೨೩ | ೬೪.೧೦ |
| ೪ | ೨೦೦೩-೨೦೦೪ | ೫೦.೪೯ | ೦೦.೭೯ | ೧೦.೬೩ | ೧೬.೧೯ |
| ೫ | ೨೦೦೪-೨೦೦೫ | ೪೧.೨೬ | ೦೦.೮೦ | ೧೨.೨೭ | ೫೪.೩೩ |
| ೬ | ೨೦೦೫-೨೦೦೬ | ೬೬.೮೧ | ೦೦.೮೩ | ೦೪.೩೬ | ೭೨.೦೦ |
| ೭ | ೨೦೦೬-೨೦೦೭ | ೬೦.೦೫ | ೦೦.೮೫ | ೧೬.೩೨ | ೭೭.೨೨ |
| ೮ | ೨೦೦೭-೨೦೦೮ | ೬೯.೪೦ | ೦೦.೮೦ | ೧೮.೫೬ | ೮೮.೭೬ |


ಒಟ್ಟು ಆದಾಯದಲ್ಲಿನ ಪ್ರಗತಿ
X
Y
0


ಒಟ್ಟು ಆದಾಯದಲ್ಲಿನ ಪ್ರಗತಿ
ಒಟ್ಟು ಆದಾಯ (ಲಕ್ಷ ರೂಪಾಯಿಗಳಲ್ಲಿ)
100
90
80
70
60
50
40
30
20
10
2000-01 83.73
2001-02 88.83
2002-03 64.10
2003-04 61.91
2004-05 54.33
2005-06 72.00
2006-07 77.22
2007-08 88.76


ಮಾರುಕಟ್ಟೆ ಶುಲ್ಕ
100
90
80
70
60
50
40
30
20
10
2000-01 75.09
2001-02 73.74
2002-03 53.94
2003-04 50.49
2004-05 41.26
2005-06 66.81
2006-07 60.50
2007-08 69.40


ಇತರೆ ಮೂಲಗಳಿಂದ ಬರುವ ಆದಾಯ
20
18
16
14
12
10
08
06
04
02
2000-01 17.83
2001-02 09.23
2002-03 09.23
2003-04 10.63
2004-05 12.27
2005-06 04.36
2006-07 16.32
2007-08 18.56

## ೪.೧೦ ಮಾರುಕಟ್ಟೆ ಶುಲ್ಕ, ಲೈಸನ್ಸ್ ಶುಲ್ಕ ಮತ್ತು ಇತರ ಮೂಲಗಳು, ಒಟ್ಟು ಆದಾಯದ ಪ್ರತಿಶತ ಪ್ರಮಾಣ ತೋರಿಸುವ ಕೋಷ್ಟಕ

(ಲಕ್ಷ ರೂ.)

| ಅ.ಸಂ | ವರ್ಷ | ಮಾರುಕಟ್ಟೆ ಶುಲ್ಕ | | ಲೈಸನ್ಸ್ ಶುಲ್ಕ | | ಇತರೆ | | ಒಟ್ಟು (ರೂ. ಲಕ್ಷ) | ಶೇ. |
|---|---|---|---|---|---|---|---|---|---|
| | | ಶುಲ್ಕ | ಒಟ್ಟು ಆದಾಯದ % ಪ್ರಮಾಣ | ಶುಲ್ಕ | ಒಟ್ಟು ಆದಾಯದ % ಪ್ರಮಾಣ | ಶುಲ್ಕ | ಒಟ್ಟು ಆದಾಯದ % ಪ್ರಮಾಣ | | |
| ೧ | ೨೦೦೦-೦೧ | ೭೫.೦೯ | ೮೯.೬೮ | ೦೦.೮೧ | ೦೦.೯೭ | ೦೭.೮೩ | ೦೯.೩೫ | ೮೩.೭೩ | ೧೦೦ |
| ೨ | ೨೦೦೧-೦೨ | ೭೩.೭೪ | ೮೭.೯೬ | ೦೦.೮೬ | ೦೧.೦೩ | ೦೯.೨೩ | ೧೧.೦೧ | ೮೩.೮೩ | ೧೦೦ |
| ೩ | ೨೦೦೨-೦೩ | ೫೩.೯೪ | ೮೪.೧೫ | ೦೦.೯೩ | ೦೧.೪೪ | ೦೯.೨೩ | ೧೪.೪೦ | ೬೪.೧೦ | ೧೦೦ |
| ೪ | ೨೦೦೩-೦೪ | ೫೦.೪೯ | ೮೧.೫೫ | ೦೦.೭೯ | ೦೧.೨೮ | ೧೦.೬೩ | ೧೭.೧೭ | ೬೧.೯೧ | ೧೦೦ |
| ೫ | ೨೦೦೪-೦೫ | ೪೧.೨೬ | ೭೫.೮೯ | ೦೦.೮೦ | ೦೧.೪೭ | ೧೨.೨೭ | ೨೨.೫೮ | ೫೪.೩೩ | ೧೦೦ |
| ೬ | ೨೦೦೫-೦೬ | ೬೬.೮೧ | ೯೨.೭೯ | ೦೦.೮೩ | ೦೧.೧೪ | ೦೪.೩೬ | ೦೬.೦೫ | ೭೨.೦೦ | ೧೦೦ |
| ೭ | ೨೦೦೬-೦೭ | ೬೦.೦೫ | ೭೭.೭೬ | ೦೦.೮೫ | ೦೧.೧೧ | ೧೬.೩೨ | ೨೧.೧೩ | ೭೭.೨೨ | ೧೦೦ |
| ೮ | ೨೦೦೭-೦೮ | ೬೯.೪೦ | ೭೮.೧೯ | ೦೦.೮೦ | ೦೦.೯೦ | ೧೮.೫೬ | ೨೦.೯೯ | ೮೮.೭೬ | ೧೦೦ |

ಈ ಮಾರುಕಟ್ಟೆ ಕ್ಷೇತ್ರದಲ್ಲಿಯ ವ್ಯವಹಾರ ವಹಿವಾಟುಗಳಿಗೆ ಅನುಗುಣವಾಗಿ, ವಿವಿಧ ಮೂಲಗಳಿಂದ ಆದಾಯ ಬರುತ್ತದೆ. ಅದರ ಒಟ್ಟು ಆದಾಯದಲ್ಲಿ ಮಾರುಕಟ್ಟೆ ಶುಲ್ಕ, ಲೈಸನ್ಸ್ ಶುಲ್ಕ, ಲೀವ್ಹ್ ಮತ್ತು ಲೈಸನ್ಸ್ ಶುಲ್ಕ, ನೋಂದಣಿ ಶುಲ್ಕ, ದಂಡ, ಠೇವಣಿಗಳ ಮೇಲಿನ ಬಡ್ಡಿ, ನೀರಿನ ಕರ ಹಾಗೂ ರಾಜ್ಯ ಸರ್ಕಾರದ ಧನಸಹಾಯ ಮುಂತಾದವುಗಳು ಪ್ರಮುಖ ಮೂಲಗಳಾಗಿವೆ. ಈ ಒಟ್ಟು ಆದಾಯವನ್ನು ಮುಖ್ಯವಾಗಿ ಮಾರುಕಟ್ಟೆಯ ಶುಲ್ಕ, ಲೈಸನ್ಸ್ ಶುಲ್ಕ ಮತ್ತು ಇತರೆ ಮೂಲಗಳೆಂದು ವಿಂಗಡಿಸಲಾಗಿದೆ.

**೪.೧೧ ಆದಾಯದ ವಿವಿಧ ಮೂಲಗಳ ಪ್ರತಿಶತತಾ ಪಾಲನ್ನು ತೋರಿಸುವ ಕೋಷ್ಟಕ**

(ಲಕ್ಷ ರೂ.)

| ಅ.ಸಂ | ವರ್ಷ | ಮಾರುಕಟ್ಟೆ ಶುಲ್ಕ | | ಲೈಸನ್ಸ್ ಶುಲ್ಕ | | ಇತರೆ | | ಒಟ್ಟು | |
|---|---|---|---|---|---|---|---|---|---|
| | | ಶುಲ್ಕ | ಪ್ರತಿಶತ | ಮೌಲ್ಯ | ಪ್ರತಿಶತ | ಮೌಲ್ಯ | ಪ್ರತಿಶತ | ಮೌಲ್ಯ | ಪ್ರತಿಶತ |
| ೧ | ೨೦೦೦-೦೧ | ೭೫.೦೯ | ೧೫.೩೦ | ೦೦.೮೧ | ೧೨.೧೪ | ೦೭.೮೩ | ೦೮.೮೫ | ೮೩.೭೩ | ೧೪.೨೯ |
| ೨ | ೨೦೦೧-೦೨ | ೭೩.೭೪ | ೧೫.೦೩ | ೦೦.೮೬ | ೧೨.೯೦ | ೦೯.೨೩ | ೧೦.೪೪ | ೮೩.೮೩ | ೧೪.೩೧ |
| ೩ | ೨೦೦೨-೦೩ | ೫೩.೯೪ | ೧೧.೦೦ | ೦೦.೯೩ | ೧೩.೯೫ | ೦೯.೨೩ | ೧೦.೪೪ | ೬೪.೧೦ | ೧೦.೯೪ |
| ೪ | ೨೦೦೩-೦೪ | ೫೦.೪೯ | ೧೦.೨೮ | ೦೦.೭೯ | ೧೧.೮೪ | ೧೦.೬೩ | ೧೨.೦೨ | ೬೧.೯೧ | ೧೦.೫೭ |
| ೫ | ೨೦೦೪-೦೫ | ೪೧.೨೬ | ೦೮.೪೧ | ೦೦.೮೦ | ೧೧.೯೯ | ೧೨.೨೭ | ೧೩.೮೮ | ೫೪.೩೩ | ೦೯.೨೭ |
| ೬ | ೨೦೦೫-೦೬ | ೬೬.೮೧ | ೧೩.೬೧ | ೦೦.೮೩ | ೧೨.೪೪ | ೦೪.೩೬ | ೦೪.೯೩ | ೭೨.೦೦ | ೧೨.೨೯ |
| ೭ | ೨೦೦೬-೦೭ | ೬೦.೦೫ | ೧೨.೨೪ | ೦೦.೮೫ | ೧೨.೭೫ | ೧೬.೩೨ | ೧೮.೪೬ | ೭೭.೨೨ | ೧೩.೧೮ |
| ೮ | ೨೦೦೭-೦೮ | ೬೯.೪೦ | ೧೪.೧೩ | ೦೦.೮೦ | ೧೧.೯೯ | ೧೮.೫೬ | ೨೦.೯೮ | ೮೮.೭೬ | ೧೫.೧೫ |
| | ಒಟ್ಟು | ೪೯೦.೭೮ | ೧೦೦ | ೦೬.೬೭ | ೧೦೦ | ೮೮.೪೩ | ೧೦೦ | ೫೮೫.೮೮ | ೧೦೦ |

### ೪.೧೨ ಆದಾಯ ಮೂಲಗಳಲ್ಲಿ ವಿವಿಧ ಘಟಕಗಳ ಬೆಳವಣಿಗೆಯ ದರವನ್ನು ತೋರಿಸುವ ಕೋಷ್ಟಕ

(ಲಕ್ಷ ರೂ.)

| ಅ.ಸಂ. | ವರ್ಷ | ಒಟ್ಟು ಆದಾಯ | | ಒಟ್ಟು ಖರ್ಚು | | ನಿವ್ವಳ ಉಳಿತಾಯ | |
|---|---|---|---|---|---|---|---|
| | | ಮೌಲ್ಯ | %ಬೆಳವಣಿಗ ದರ | ಮೌಲ್ಯ | % ಬೆಳವಣಿಗೆ ದರ | ಮೌಲ್ಯ | % ಬೆಳವಣಿಗೆ ದರ |
| ೧ | ೨೦೦೦-೦೧ | ೮೩.೭೩ | -- | ೪೩.೨೩ | -- | ೪೦.೫೦ | -- |
| ೨ | ೨೦೦೧-೦೨ | ೮೩.೮೩ | ೧೦೦.೧೨ | ೪೪.೧೫ | ೧೦೨.೧೩ | ೩೯.೬೮ | ೯೭.೯೮ |
| ೩ | ೨೦೦೨-೦೩ | ೬೪.೧೦ | ೭೬.೪೬ | ೩೮.೪೯ | ೮೭.೧೮ | ೨೫.೬೧ | ೬೪.೫೪ |
| ೪ | ೨೦೦೩-೦೪ | ೬೧.೯೧ | ೯೬.೫೮ | ೩೯.೮೩ | ೧೦೩.೪೮ | ೨೨.೦೮ | ೮೬.೨೨ |
| ೫ | ೨೦೦೪-೦೫ | ೫೪.೩೩ | ೮೭.೭೬ | ೩೦.೮೬ | ೭೭.೪೮ | ೨೩.೪೭ | ೧೦೪.೧೭ |
| ೬ | ೨೦೦೫-೦೬ | ೭೨.೦೦ | ೧೩೨.೫೨ | ೫೨.೩೭ | ೧೬೯.೭೦ | ೧೯.೬೩ | ೮೬.೬೪ |
| ೭ | ೨೦೦೬-೦೭ | ೭೭.೨೨ | ೧೦೭.೨೫ | ೨೩.೬೬ | ೪೫.೧೮ | ೫೩.೫೬ | ೨೭೨.೮೫ |
| ೮ | ೨೦೦೭-೦೮ | ೮೬.೭೬ | ೧೧೪.೯೪ | ೫೬.೮೪ | ೨೪೦.೨೪ | ೩೧.೯೨ | ೫೯.೬೦ |

**೪.೭ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ದೊರೆಯುವ ಒಟ್ಟು ಆದಾಯದಲ್ಲಿ ಕಂಡುಬರುವ ಪ್ರಗತಿಯ ಪರಿಶೀಲನೆ :**

೨೦೦೦-೦೧ ನ್ನು ಆಧಾರ ವರ್ಷವೆಂದು ಪರಿಗಣಿಸಿದಾಗ ಪ್ರತಿ ಚಾಲ್ತಿ ವರ್ಷದಲ್ಲಿ ಆದಾಯದ ಪ್ರಮಾಣವನ್ನು ಹಿಂದಿನ ವರ್ಷ / ವರ್ಷಗಳಿಗೆ ಹೋಲಿಸಿ ಬೆಳವಣಿಗೆಯನ್ನು ಪರಿಶೀಲಿಸಲಾಗುತ್ತದೆ.

೧) ೨೦೦೧-೦೨ ರಲ್ಲಿ ಒಟ್ಟು ಆದಾಯ ೮೩.೮೩ ಲಕ್ಷ ರೂಪಾಯಿ ಇರುತ್ತದೆ. ೨೦೦೦-೦೧ ರಲ್ಲಿಯ ಒಟ್ಟು ಆದಾಯಕ್ಕೆ ಹೋಲಿಸಿದರೆ ೦.೧೦ ಲಕ್ಷರೂಪಾಯಿಗಳ ಏರಿಕೆಯನ್ನು ಕಾಣುತ್ತೇವೆ. ಇದು ಪ್ರತಿಶತ ೦.೧೨ ರಷ್ಟು ವೃದ್ಧಿಯನ್ನು ತೋರಿಸುತ್ತದೆ.

೨) ೨೦೦೨-೦೩ ರಲ್ಲಿ ಒಟ್ಟು ಆದಯ ೬೪.೧೦ ಲಕ್ಷ ರೂಪಾಯಿಗಳಿದ್ದು, ೨೦೦೦-೦೧ ರ ಆದಾಯಕ್ಕಿಂತ ೧೯.೬೩ ಲಕ್ಷ ರೂಪಾಯಿ ಮತ್ತು ೨೦೦೧-೦೨ ರ ಆದಾಯಕ್ಕಿಂತ ೧೯.೭೩ ಲಕ್ಷ ರೂಪಾಯಿಗಳಿಗೆ ಇಳಿಕೆಯಾಗಿದೆ. ಆದರೆ ಇಳಿಕೆಯ ಪ್ರಮಾಣವು ೨೦೦೦-೦೧ ಕ್ಕೆ ಹೋಲಿಸಿದರೆ ಶೇ. ೨೩.೪೪ ಮತ್ತು ೨೦೦೧-೦೨ ಕ್ಕೆ ಹೋಲಿಸಿದಾಗ ಶೇ. ೨೪.೫೪ ರಷ್ಟು ತೋರಿಸುತ್ತದೆ.

೩) ೨೦೦೩-೦೪ ರ ಒಟ್ಟು ಆದಾಯವು, ೨೦೦೦-೦೧, ೨೦೦೧-೦೨ ಮತ್ತು ೨೦೦೨-೦೩ ರಕ್ಕಿಂತ ೨೧.೮೨ ಲಕ್ಷ ರೂಪಾಯಿ, ೨೧.೮೨ ಲಕ್ಷ ರೂಪಾಯಿ ಮತ್ತು ೨.೧೯ ಲಕ್ಷರೂಪಾಯಿ ಇಳಿಕೆಯಾಗಿದ್ದು ಕಂಡುಬರುತ್ತದೆ. ಇದರ ಶೇಕಡಾವಾರು ಇಳಿಕೆಯ ಪ್ರಮಾಣ ೨೦೦೦-೦೧ ಕ್ಕೆ ಶೇ. ೨೬.೦೬, ೨೦೦೧-೦೨ ಕ್ಕೆ ಶೇ. ೨೬.೧೫ ಮತ್ತು ೨೦೦೨-೦೩ ರಲ್ಲಿ ಶೇ. ೩.೪೨ ರಷ್ಟು ಇರುತ್ತದೆ.

೪) ೨೦೦೪-೦೫ ರ ಒಟ್ಟು ಆದಾಯವು ಅನುಕ್ರಮವಾಗಿ ೨೦೦೦-೦೧ ರಿಂದ ೨೦೦೩-೦೪ ರವರೆಗೆ ೨೯.೪೦ ಲಕ್ಷ ರೂಪಾಯಿ, ೨೯.೫೦ ಲಕ್ಷ ರೂಪಾಯಿ, ೧೦.೫೮ ಲಕ್ಷ ರೂಪಾಯಿ ಮತ್ತು ೭.೫೮ ಲಕ್ಷ ರೂಪಾಯಿಗಳಷ್ಟುಇಳಿಕೆಯಾಗಿದೆ. ಇದೇ ಅವಧಿಯಲ್ಲಿ ಇಳಿಕೆಯ ದರವು ೨೦೦೦-೦೧ ರ ಶೇ. ೩೫.೧೧, ೨೦೦೧-೦೨ ರ ಶೇ. ೩೫.೧೯, ೨೦೦೨-೦೩ ರ ಶೇ. ೧೫.೨೪ ಮತ್ತು ೨೦೦೪-೦೫ ರ ಶೇ. ೧೨.೨೪ ರಂತೆ ಇಳಿಕೆಯಾಗಿದೆ.

೫) ೨೦೦೫-೦೬ ರ ಒಟ್ಟು ಆದಾಯವು ೨೦೦೦-೦೧ ರಿಂದ ೨೦೦೧-೦೨ ಕ್ಕೆ ೧೧.೭೩ ಲಕ್ಷ ರೂಪಾಯಿ ಮತ್ತು ೧೧.೮೩ ಲಕ್ಷ ರೂಪಾಯಿಗಳಷ್ಟು ಇಳಿಕೆಯಾಗಿದ್ದು, ೨೦೦೨-೦೩ ರಿಂದ ೨೦೦೪-೦೫ ರವರೆಗೆ ೭.೯೫ ಲಕ್ಷ ರೂಪಾಯಿ, ೧೦.೦೯ ಲಕ್ಷ ರೂಪಾಯಿ ಮತ್ತು ೧೭.೬೭ ಲಕ್ಷ ರೂಪಾಯಿಗಳಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರವು ೨೦೦೦-೦೧ ರ ಶೇ. ೧೪.೦೧, ೨೦೦೧-೦೨ ರ ಶೇ. ೧೪.೧೧ ರಷ್ಟು ಇಳಿಕೆಯನ್ನು ಮತ್ತು ೨೦೦೨-೦೩ ರ ಶೇ. ೧೨.೩೨, ೨೦೦೩-೦೪ ರ ಶೇ. ೧೬.೩೦ ಮತ್ತು ೨೦೦೪-೦೫ ರ ಶೇ. ೩೨.೫೨ ರಷ್ಟು ಏರಿಕೆಯ ಧೋರಣೆಯನ್ನು ತೋರಿಸುತ್ತದೆ.

೬) ೨೦೦೬-೦೭ ರ ಒಟ್ಟು ಆದಾಯವು ೨೦೦೦-೦೧ ಮತ್ತು ೨೦೦೧-೦೨ ಕ್ಕೆ ಹೋಲಿಸಿದರೆ ೬.೫೧ ಲಕ್ಷ ರೂಪಾಯಿ ಮತ್ತು ೬.೬೧ ಲಕ್ಷ ರೂಪಾಯಿಗಳಷ್ಟು ಇಳಿಕೆಯನ್ನು, ೨೦೦೨-೦೩ ಕ್ಕೆ ೧೩.೧೨ ಲಕ್ಷ ರೂಪಾಯಿ, ೨೦೦೩-೦೪ ಕ್ಕೆ ೧೫.೩೧ ಲಕ್ಷ ರೂಪಾಯಿ, ೨೦೦೪-೦೫ ಕ್ಕೆ ೨೨.೮೯ ಲಕ್ಷ ರೂಪಾಯಿ ಮತ್ತು೨೦೦೫-೦೬ ಕ್ಕೆ ೫.೨೨ ಲಕ್ಷ ರೂಪಾಯಿಗಳಷ್ಟು ಏರಿಕೆಯನ್ನು ತೋರಿಸುತ್ತದೆ. ಬೆಳವಣಿಗೆಯ ದರ ೨೦೦೦-೦೧ ರ ಶೇ. ೭.೭೭, ೨೦೦೧-೦೨

ರ ಶೇ. ೭.೮೮ ಪ್ರಮಾಣದಲ್ಲಿ ಇಳಿಕೆಯನ್ನು ಮತ್ತು ೨೦೦೨-೦೩ ರ ಶೇ. ೨೦.೪೭, ೨೦೦೩-೦೪ ರ ಶೇ. ೨೪.೭೩, ೨೦೦೪-೦೫ ರ ಶೇ. ೪೨.೧೩ ಮತ್ತು ೨೦೦೫-೦೬ ರ ಶೇ. ೭.೨೫ ರಷ್ಟು ಏರಿಕೆಯನ್ನು ತೋರಿಸುತ್ತದೆ.

೭) ೨೦೦೭-೦೮ ರ ಒಟ್ಟು ಆದಾಯವು ೨೦೦೦-೦೧ ರಿಂದ ೨೦೦೬-೦೭ ರವರೆಗಿನ ಹೋಲಿಕೆಗೆ ಅನುಕ್ರಮವಾಗಿ ೫.೦೩ ಲಕ್ಷ ರೂಪಾಯಿ, ೪.೯೩ ಲಕ್ಷ ರೂಪಾಯಿ, ೨೪.೬೬ ಲಕ್ಷ ರೂಪಾಯಿ, ೨೬.೮೫ ಲಕ್ಷ ರೂಪಾಯಿ, ೩೪.೪೩ ಲಕ್ಷ ರೂಪಾಯಿ, ೧೬.೭೬ ಲಕ್ಷ ರೂಪಾಯಿ ಮತ್ತು ೧೧.೫೪ ಲಕ್ಷ ರೂಪಾಯಿಳಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರ ೨೦೦೦-೦೧ ರ ಶೇ. ೬.೦೧, ೨೦೦೧-೦೨ ರ ಶೇ. ೫.೮೮, ೨೦೦೨-೦೩ ರ ಶೇ. ೩೮.೪೭, ೨೦೦೩-೦೪ ರ ಶೇ. ೪೩.೩೭, ೨೦೦೪-೦೫ ರ ಶೇ ೬೩.೩೭, ೨೦೦೫-೦೬ ರ ಶೇ. ೨೩.೨೮ ಮತ್ತು ೨೦೦೬-೦೭ರ ೧೪.೯೪ ರಷ್ಟು ಪ್ರಮಾಣದಲ್ಲಿ ಏರಿಕೆಯಾಗಿದೆ.

**೪.೮ ವೆಚ್ಚದ ಪ್ರಮಾಣದಲ್ಲಿಯ ಬೆಳವಣಿಗೆಯ ಪರಿಶೀಲನೆ :**

೧) ೨೦೦೧-೦೨ ರಲ್ಲಿಯ ಒಟ್ಟು ವೆಚ್ಚವು ೨೦೦೦-೦೧ ಕ್ಕೆ ಹೋಲಿಸಿದರೆ ೦.೯೨ ಲಕ್ಷ ರೂಪಾಯಿಗಳಷ್ಟು ಹೆಚ್ಚಾಗಿದೆ. ಅದರ ಏರಿಕೆಯ ದರವು ಶೇ. ೨.೧೩ ರಷ್ಟು ಇರುತ್ತದೆ.

೨) ೨೦೦೨-೦೩ ರಲ್ಲಿಯ ಒಟ್ಟು ವೆಚ್ಚವು ೨೦೦೦-೦೧ ರಕ್ಕಿಂತ ೪.೭೪ ಲಕ್ಷ ಮತ್ತು ೨೦೦೧-೦೨ ರಕ್ಕಿಂತ ೫.೬೬ ಲಕ್ಷ ರೂಪಾಯಿಗಳಷ್ಟು ಇಳಿಕೆಯಾಗಿದೆ. ಅದರ ಇಳಿಕೆಯ ದರವು ೨೦೦೦-೦೧ ಕ್ಕೆ ಶೇ. ೧೦.೯೬ ರಷ್ಟು, ೨೦೦೧-೦೨ ಕ್ಕೆ ಶೇ. ೧೨.೮೨ ರಷ್ಟು ಇಳಿಕೆಯಾಗಿದೆ.

೩) ೨೦೦೩-೦೪ ರಲ್ಲಿಯ ಒಟ್ಟು ವೆಚ್ಚವು, ೨೦೦೦-೦೧ ಮತ್ತು ೨೦೦೧-೦೨ ರಲ್ಲಿ ರೂ. ೩.೪೦ ಲಕ್ಷ ಹಾಗೂ ೪.೩೨ ಲಕ್ಷ ರೂಪಾಯಿಗಳಷ್ಟು ಇಳಿಕೆಯಾದರೆ, ೨೦೦೨-೦೩ ರಕ್ಕಿಂತ ೧.೩೪ ಲಕ್ಷ ರೂಪಾಯಿದಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರವು ೨೦೦೦-೦೧ ಕ್ಕೆ ಶೇ. ೭.೮೬, ೨೦೦೧-೦೨ ಕ್ಕೆ ಶೇ. ೯.೭೮ ರಷ್ಟು ಇಳಿಕೆಯ ಹಾಗೂ ೨೦೦೨-೦೩ ರಕ್ಕಿಂತ ಶೇ. ೩.೪೮ರಷ್ಟು ಏರಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ.

೪) ೨೦೦೪-೦೫ ರಲ್ಲಿಯ ಒಟ್ಟು ವೆಚ್ಚವು ೨೦೦೦-೦೧ ರಿಂದ ೨೦೦೩-೦೪ ರವರೆಗೆ ಅನುಕ್ರಮವಾಗಿ ೧೨.೩೭ ಲಕ್ಷ ರೂಪಾಯಿ, ೧೩.೨೯ ಲಕ್ಷರೂಪಾಯಿ, ೭.೬೩ ಲಕ್ಷ ರೂಪಾಯಿ ಮತ್ತು ೮.೯೭ ಲಕ್ಷ ರೂಪಾಯಿಗಳಷ್ಟು ಇಳಿಕೆಯಾಗಿದೆ. ಅದರಂತೆ ಬೆಳವಣಿಗೆ ದರದಲ್ಲಿಯೂ ಅನುಕ್ರಮವಾಗಿ ೨೦೦೦-೦೧ ರಿಂದ ೨೦೦೩-೦೪ ರವರೆಗೆ ಶೇ. ೨೮.೬೧, ಶೇ. ೩೦.೧೦, ಶೇ. ೧೯.೮೨ ಮತ್ತು ಶೇ. ೨೨.೫೨ ರಷ್ಟು ಇಳಿಕೆಯಾಗಿರುವದು ಕಂಡುಬರುತ್ತದೆ.

೫) ೨೦೦೫-೦೬ ರಲ್ಲಿಯ ಒಟ್ಟು ವೆಚ್ಚವು ೨೦೦೦-೦೧ ರಿಂದ ೨೦೦೪-೦೫ ರವರೆಗಿನ ವೆಚ್ಚಕ್ಕೆ ಹೋಲಿಸಿದಾಗ ಅನುಕ್ರಮವಾಗಿ ೯.೧೪ ಲಕ್ಷ ರೂಪಾಯಿ, ೮.೨೨ ಲಕ್ಷ ರೂಪಾಯಿ, ೧೩.೮೮ ಲಕ್ಷ ರೂಪಾಯಿ, ೧೨.೫೪ ಲಕ್ಷ ರೂಪಾಯಿ ಮತ್ತು ೨೧.೫೧ ಲಕ್ಷ ರೂಪಾಯಿಗಳಷ್ಟು

ಏರಿಕೆಯಾಗಿದೆ. ವೆಚ್ಚದ ಬೆಳವಣಿಗೆಯ ದರವು ೨೦೦೦-೦೧ ರಿಂದ ೨೦೦೪-೦೫ ರವರೆಗೆ ಶೇ. ೨೧.೧೪, ಶೇ. ೧೮.೬೨, ಶೇ. ೩೬.೦೬, ಶೇ. ೩೧.೪೮, ಶೇ. ೬೯.೭೦ ರಷ್ಟು ಪ್ರಮಾಣದಲ್ಲಿ ಏರಿಕೆಯಾಗಿದೆ.

೬) ೨೦೦೬-೦೭ ರಲ್ಲಿ ಒಟ್ಟು ವೆಚ್ಚವು ೨೦೦೦-೦೧ ರಿಂದ ೨೦೦೫-೦೬ ರವರೆಗೆ ಅನುಕ್ರಮವಾಗಿ ೧೯.೫೭ ಲ.ರೂ., ೨೦.೪೯ ಲ.ರೂ., ೧೪.೮೩ ಲ.ರೂ., ೧೬.೧೭ ಲ.ರೂ, ೭.೨೦ ಲ.ರೂ. ಮತ್ತು ೨೮.೭೧ ಲ.ರೂ.ಗಳಷ್ಟು ಇಳಿಕೆಯಾಗಿದೆ. ವೆಚ್ಚದ ಬೆಳವಣಿಗೆಯ ದರವು ಅನುಕ್ರಮವಾಗಿ ಶೇ. ೪೫.೨೭, ಶೇ. ೪೬.೪೧, ಶೇ. ೩೮.೫೩, ಶೇ. ೪೦.೬೦, ಶೇ. ೨೩.೩೩ ಮತ್ತು ಶೇ. ೫೫.೩೯ ರಷ್ಟಿದ್ದು ಇಳಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ.

೭) ೨೦೦೭-೦೮ ರಲ್ಲಿಯ ಒಟ್ಟು ವೆಚ್ಚವು ೨೦೦೦-೦೧ ರಿಂದ ೨೦೦೬-೦೭ ರವರೆಗೆ ಅನುಕ್ರಮವಾಗಿ ೧೩.೬೧ ಲ.ರೂ., ೧೨.೬೯ ಲ.ರೂ., ೧೮.೩೫ ಲ.ರೂ., ೧೭.೦೧ ಲ.ರೂ., ೨೫.೯೮ ಲ.ರೂ., ೪.೪೭ ಲ.ರೂ. ಹಾಗೂ ೩೩.೧೮ ಲ.ರೂ.ಗಳಷ್ಟು ಏರಿಕೆಯನ್ನು ತೋರಿಸುತ್ತದೆ. ಬೆಳವಣಿಗೆಯ ದರದಲ್ಲಿ ಶೇ. ೩೧.೪೮, ಶೇ. ೨೮.೭೪, ಶೇ. ೪೭.೬೭, ಶೇ. ೪೨.೭೧, ಶೇ. ೮೪.೧೯, ಶೇ. ೮.೫೪ ಮತ್ತು ಶೇ. ೧೪೦.೨೪ ರಷ್ಟು ಅನುಕ್ರಮವಾಗಿ ೨೦೦೦-೦೧ ರಿಂದ ೨೦೦೬-೦೭ ರವರೆಗೆ ಏರಿಕೆಯ ಪ್ರವೃತ್ತಿ ಹೊಂದಿದೆ.

**೪.೯ ನಿವ್ವಳ ಉಳಿತಾಯದ ಬೆಳವಣಿಗೆಯ ಪರಿಶೀಲನೆ :**

೧) ೨೦೦೧-೦೨ ರಲ್ಲಿಯ ನಿವ್ವಳ ಉಳಿತಾಯವು ೨೦೦೦-೦೧ ಕ್ಕೆ ಹೋಲಿಸಿದರೆ ೦.೮೨ ಲ.ರೂ., ಇಳಿಕೆಯಾಗಿದೆ. ಇಳಿಕೆಯ ದರವು ಶೇ. ೨.೦೩ ರಷ್ಟು ಇರುತ್ತದೆ.

೨) ೨೦೦೨-೦೩ ರ ನಿವ್ವಳ ಉಳಿತಾಯವು ೨೦೦೦-೦೧ ರ ೧೪.೮೯ ಲ.ರೂ., ೨೦೦೧-೦೨ ರ ೧೪.೦೭ ಲ.ರೂ.ಗಳಷ್ಟು ಇಳಿಕೆಯಾಗಿದೆ. ಅದರ ಬೆಳವಣಿಗೆಯ ದರ ಶೇ. ೬೩.೨೩ ಮತ್ತು ಶೇ. ೩೫.೪೬ ಇಲಿಕೆಯಾಗಿದೆ.

೩) ೨೦೦೩-೦೪ ರ ನಿವ್ವಳ ಉಳಿತಾಯವು ೨೦೦೦-೦೧ ರಿಂದ ೨೦೦೨-೦೩ ರವರೆಗಿನ ಉಳಿತಾಯಕ್ಕಿಂತ ೧೮.೪೨ ಲ.ರೂ., ೧೭.೬ ಲ.ರೂ., ೩.೫೩ ಲ.ರೂ. ಗಳಷ್ಟು ಅನುಕ್ರಮವಾಗಿ ಇಳಿಕೆಯಾಗಿದೆ. ಬೆಳವಣಿಗೆ ದರದಲ್ಲಿಯೂ ಅನುಕ್ರಮವಾಗಿ ಶೇ. ೪೫.೪೮, ಶೇ. ೪೪.೩೫, ಶೇ. ೧೩.೭೮ ರಷ್ಟು ಪ್ರಮಾಣದಲ್ಲಿ ಇಳಿಕೆಯಾಗಿರುವದು ಕಂಡುಬರುತ್ತದೆ.

೪) ೨೦೦೪-೦೫ ರ ಉಳಿತಾಯವು ೨೦೦೦-೦೧ ರಿಂದ ೨೦೦೨-೦೩ ರವರೆಗೆ ೧೭.೦೩ ಲ.ರೂ., ೧೬.೨೧ ಲ.ರೂ., ೨.೧೪ ಲ.ರೂ.ಗಳಷ್ಟು ಇಳಿಕೆಯಾದರೆ, ೨೦೦೩-೦೪ ರ ಪ್ರಮಾಣಕ್ಕಿಂತ ೧.೩೯ ಲ.ರೂ. ರಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರ ೨೦೦೦-೦೧ ಕ್ಕೆ ಶೇ. ೪೨.೦೫, ೨೦೦೧-೦೨ ಕ್ಕೆ ಶೇ. ೪೦.೮೫, ೨೦೦೨-೦೩ ಕ್ಕೆ ಶೇ. ೮.೩೬ ರಷ್ಟು ಇಳಿಕೆಯ ಮತ್ತು ೨೦೦೩-೦೪ ಕ್ಕೆ ಶೇ. ೬.೩೦ ರಷ್ಟು ಏರಿಕೆಯ ಪ್ರವೃತ್ತಿಯನ್ನು ತೋರಿಸುತ್ತದೆ.

೫) ೨೦೦೫-೦೬ ರ ಉಳಿತಾಯವು ೨೦೦೦-೦೧ ರಿಂದ ೨೦೦೪-೦೫ ರವರೆಗೆ ಸತತವಾಗಿ ಇಳಿಕೆಯಾಗಿದೆ. ಅದು ಅನುಕ್ರಮವಾಗಿ ೨೦.೮೭ ಲ.ರೂ., ೨೦.೦೫ ಲ.ರೂ., ೫.೯೮ ಲ.ರೂ., ೨.೪೫ ಲ.ರೂ., ೩.೮೪ ಲ.ರೂ.ಗಳಷ್ಟು ಇಳಿಕೆಯಾಗಿದೆ. ಬೆಳವಣಿಗೆಯ ದರ ಅನುಕ್ರಮವಾಗಿ ಶೇ. ೫೧.೫೩, ಶೇ. ೫೦.೫೩, ಶೇ. ೨೩.೩೫, ಶೇ. ೧೧.೧೦ ಮತ್ತು ಶೇ. ೧೬.೩೬ ಕ್ಕೆ ಇಳಿಕೆಯಾಗಿದೆ.

೬) ೨೦೦೬-೦೭ ರ ಉಳಿತಾಯವು ೨೦೦೦-೦೧ ರಿಂದ ೨೦೦೫-೦೬ ರವರೆಗೆ ಏರಿಕೆಯಾಗಿದೆ. ಅದು ಅನುಕ್ರಮವಾಗಿ ೧೩.೦೬ ಲ.ರೂ., ೧೩.೮೮ ಲ.ರೂ., ೨೭.೯೫ ಲ.ರೂ., ೩೧.೪೮ ಲ.ರೂ., ೩೦.೦೯ ಲ.ರೂ. ಮತ್ತು ೩೩.೯೩ ಲ.ರೂ.ಗಳಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರವು ಅನುಕ್ರಮವಾಗಿ ಶೇ. ೩೨.೨೫, ಶೇ. ೩೪.೯೮, ಶೇ. ೧೦೯.೧೩, ಶೇ. ೧೪೨.೫೭, ಶೇ. ೧೨೮.೨೦ ಮತ್ತು ಶೇ. ೧೭೨.೮೫ ರ ಪ್ರಮಾಣದಲ್ಲಿ ಏರಿಕೆಯಾಗಿದೆ.

೭) ೨೦೦೭-೦೮ ರ ಉಳಿತಾಯದ ಪ್ರಮಾಣವು ೨೦೦೦-೦೧ ಕ್ಕಿಂತ ೮.೫೮ ಲ.ರೂ., ೨೦೦೧-೦೨ ಕ್ಕಿಂತ ೭.೭೬ ಲ.ರೂ., ೨೦೦೬-೦೭ ಕ್ಕಿಂತ ೨೧.೬೪ ಲ.ರೂ.ಗಳಷ್ಟು ಇಳಿಕೆಯನ್ನು ಹಾಗೂ ೨೦೦೨-೦೩ ಕ್ಕಿಂತ ೬.೩೧ ಲ.ರೂ., ೨೦೦೩-೦೪ ಕ್ಕಿಂತ ೯.೮೪ ಲ.ರೂ., ೨೦೦೪-೦೫ ಕ್ಕಿಂತ ೮.೪೫ ಲ.ರೂ. ಮತ್ತು ೨೦೦೫-೦೬ ಕ್ಕಿಂತ ೧೨.೨೯ ಲ.ರೂ.ಗಳಷ್ಟು ಏರಿಕೆಯಾಗಿದೆ. ಬೆಳವಣಿಗೆಯ ದರವು ೨೦೦೦-೦೧ ಕ್ಕೆ ಶೇ. ೨೧.೧೯, ೨೦೦೧-೦೨ ಕ್ಕೆ ಶೇ. ೧೯.೫೬ ಮತ್ತು ೨೦೦೬-೦೭ ರ ಶೇ. ೪೦.೪೦ ರ ಪ್ರಮಾಣದಲ್ಲಿ ಇಳಿಕೆಯಾದರೆ, ೨೦೦೨-೦೩ ರ ಶೇ. ೨೪.೬೪, ೨೦೦೩-೦೪ ರ ಶೇ. ೪೪.೫೭, ೨೦೦೪-೦೫ ರ ಶೇ. ೩೬ ಮತ್ತು ೨೦೦೪-೦೫ ರ ಶೇ. ೬೨.೬೧ ರ ಪ್ರಮಾಣದಲ್ಲಿ ಏರಿಕೆಯಾಗಿದೆ.

ಒಟ್ಟಿನಲ್ಲಿ ನಿವ್ವಳ ಉಳಿತಾಯದ ಪ್ರಮಾಣವನ್ನು ಒಟ್ಟು ಆದಾಯ ಮತ್ತು ಒಟ್ಟು ವೆಚ್ಚಕ್ಕೆ ಹೋಲಿಸಿದಾಗ ಆದಾಯ ಹೆಚ್ಚಿದ್ದು ವೆಚ್ಚ ಕಡಿಮೆಯಿದ್ದಾಗ ಆ ವರ್ಷದಲ್ಲಿ ಹೆಚ್ಚಿನ ನಿವ್ವಳ ಉಳಿತಾಯವಾಗಿರುವದು ಕಂಡುಬರುತ್ತದೆ. ಆದಾಯ ಕಡಿಮೆಯಾದಾಗ ಅಷ್ಟೇ ಪ್ರಮಾಣದಲ್ಲಿ ವೆಚ್ಚವು ಕಡಿಮೆಯಾಗಿರುವದಿಲ್ಲ. ಅದರ ಪರಿಣಾಮದಿಂದಾಗಿ ನಿವ್ವಳ ಉಳಿತಾಯದಲ್ಲಿ ಇಳಿಕೆಯಾಗುತ್ತದೆ. ಒಟ್ಟು ವೆಚ್ಚದಲ್ಲಿ ಕಟ್ಟಡ, ಸ್ಥಾವರ, ರಸ್ತೆ ಮುಂತಾದ ಸ್ಥಿರ ವೆಚ್ಚಗಳು ಕೂಡಿರುವದಕ್ಕಾಗಿ ವೆಚ್ಚಕ್ಕೂ ಮತ್ತು ಆದಾಯಕ್ಕೂ ಯಾವುದೇ ರೀತಿಯ ನೇರವಾದ ಸಂಬಂಧ ಕಲ್ಪಿಸಲು ಸಾಧ್ಯವಿಲ್ಲ.

